ಕನ್ನಡ

# ಹೂಮಾಲೆ

[ಪದ್ಯ ಸಂಗ್ರಹ]

ಸಂಪಾದಕರು:
ಪ್ರೊ. ಡಿ. ಕೆ. ಭೀಮಸೇನರಾವ್, ಎಂ. ಎ.





ಪ್ರಕಾಶಕರು:
ತ್ಯಾಶ್ರಯ ಪ್ರಕಾಶನ ಮಂದಿರ,
ರಾಯಚೂರು.

ಕನ್ನಡ

# ಹೂಮಾಲೆ

[ಪದ್ಯ ಸಂಗ್ರಹ]

ಸಂಪಾದಕರು:

ಪ್ರೊ. ಡಿ. ಕೆ. ಭೀಮಸೇನರಾವ್, ಎಂ. ಎ.





ಪ್ರಕಾಶಕರು:

ಸತ್ಯಾಶ್ರಯ ಪ್ರಕಾಶನ ಮಂದಿರ,

ರಾಯಚೂರು.

## ಸಂಪಾದಕರ ಮಾತು

ಕನ್ನಡದ ಉತ್ತಮ ಕವಿಗಳ ಕೃತಿಗಳಿಂದ ಉತ್ತಮವಾದ ಕಾವ್ಯಭಾಗ ವನ್ನು ಇಲ್ಲಿ ಸಂಗ್ರಹಿಸಿದೆ. ಕನ್ನಡದ ಉತ್ತಮ ಕಾವ್ಯಭಾಗವನ್ನು ಒಂದೇ ಎಡೆಯಲ್ಲಿ ಓದಿ ಕಾವ್ಯಸ್ವಾರಸ್ಯವನ್ನು ಆಸ್ವಾದಿಸುವುದರಲ್ಲಿ ಇದರಿಂದ ವಿದ್ಯಾರ್ಥಿಗಳಿಗೂ, ಸಾಮಾನ್ಯ ಜನರಿಗೂ ಸಹಾಯವಾಗಲೆಂದು ನಿರೀಕ್ಷಿಸಿದೆ. ಕವಿಪರಿಚಯವನ್ನೂ ಸಂದರ್ಭಸೂಚಿಯನ್ನೂ ಗ್ರಂಥದ ಪರಿಶಿಷ್ಟದಲ್ಲಿ ಕೊಡಲಾಗಿದೆ. ವಾಚಕರು ಪದ್ಯವನ್ನು ಓದುವುದಕ್ಕೆ ಮುಂಚೆ ಆ ಪದ್ಯದ ವಿಷಯವಾಗಿ ಕೊಟ್ಟ ಟಿಪ್ಪಣಿಯನ್ನು ಪರಿಶಿಷ್ಟದಲ್ಲಿ ಓದಿಕೊಳ್ಳಬೇಕು.

ಸಾಮಾನ್ಯವಾಗಿ ಕವಿಗಳ ಕಾಲಾನುಕ್ರಮದ ದೃಷ್ಟಿಯಿಂದ ಪದ್ಯ ಗಳನ್ನು ಕೊಡಲಾಗಿದೆ. ಕವಿ ಚರಿತ್ರೆಯಲ್ಲಿ ಉಕ್ತವಾದ ಕಾಲಾನುಕ್ರಮವನ್ನೇ ಇಲ್ಲಿ ಇಟ್ಟುಕೊಂಡಿದೆ. ಕನಕದಾಸರ ಹೆಸರು ಪುರಂದರದಾಸರ ಹೆಸರಿಗೆ ಮುಂಚೆ ಬಂದಿದೆ. ಕನಕದಾಸರ ಕಾವ್ಯದಿಂದ ಪದ್ಯಭಾಗವನ್ನು ಮೊದಲು ಆರಿಸಿಕೊಂಡಿರುವುದರಿಂದ ಕನಕದಾಸರ ಹೆಸರು ಪುರಂದರದಾಸರ ಹೆಸರಿಗೆ ಮುಂಚೆ ಕೊಡಬೇಕಾಯಿತು. ಕೀರ್ತನೆಗಳನ್ನೆಲ್ಲ ಒಂದೇ ಕಡೆಗೆ ಸೇರಿಸಿರು ವುದರಿಂದ ಸರ್ಪಭೂಷಣ ಕವಿಯ ಕೀರ್ತನೆಯನ್ನು ಇದೇ ಸಂದರ್ಭದಲ್ಲಿ ಕೊಡಲಾಗಿದೆ. ಲಕ್ಷ್ಮೀಶ, ಸರ್ವಜ್ಞ, ಸೋಮನಾಥ ಮೊದಲಾದ ಕವಿಗಳ ಕಾಲ ವಿವಾದಾಸ್ಪದವಾಗಿರುವುದರಿಂದ ಕವಿಚರಿತ್ರೆಕಾರರ ಅಭಿಪ್ರಾಯವನ್ನೇ ಸಾಮಾನ್ಯವಾಗಿ ಇಲ್ಲಿ ಅನುಸರಿಸಲಾಗಿದೆ.

**ಡಿ. ಕೆ. ಭೀಮಸೇನರಾವ್**

## ಪ್ರಕಾಶಕರ ಅರಿಕೆ

ಉಸ್ಮಾನಿಯಾ ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರಾಗಿರುವ ಪ್ರೊ. ಡಿ. ಕೆ. ಭೀಮಸೇನರಾಯರು ಈ ಪದ್ಯಸಂಕಲನವನ್ನು ನಮಗಾಗಿ ಸಂಪಾದಿಸಿಕೊಟ್ಟಿರುವುದರಿಂದ ಅವರ ಉಪಕಾರವನ್ನು ಸ್ಮರಿಸುತ್ತೇವೆ.

ಈ ಪುಸ್ತಕದಲ್ಲಿ ಆಧುನಿಕ ಕವಿಗಳ ಕೃತಿಗಳನ್ನೂ ಆರಿಸಿಕೊಂಡಿದೆ. ಆ ಕವಿಗಳಿಗೆ ನಮ್ಮ ಕೃತಜ್ಞತೆಗಳು.

# ಅನುಕ್ರಮಣಿಕೆ

---


ಈ ಪದ್ಯಸಂಗ್ರಹವು ರಾಯಚೂರು ಸತ್ಯಾಶ್ರಯ ಪ್ರಕಾಶನ ಮಂದಿರದ ಒಡೆಯರಾದ **ಜೆ. ಕೆ. ಪ್ರಾಣೇಶಾಚಾರ್ಯ**ರಿಂದ ಪ್ರಕಾಶಿಸಲ್ಪಟ್ಟಿದೆ.

# ೧. ಕನ್ನಡ ನಾಡು

ಕಂ॥ ಕಾವೇರಿಯಿಂದಮಾ ಗೋ।
ದಾವರಿವರಮಿರ್ದ್ದ ನಾಡದಾ ಕನ್ನಡದೊಳ್॥
ಭಾವಿಸಿದ ಜನಪದಂ ವಸು।
ಧಾವಳಯವಿಲೀನವಿಶದವಿಷಯವಿಶೇಷಂ ॥೧॥

ಅದಱೊಳಗಂ ಕಿಸುವೊೞಲಾ।
ವಿದಿತಮಹಾಕೊಪಣನಗರದಾ ಪುರಿಗೆಱೆಯಾ॥
ಸದಭಿಸ್ತುತಮಪ್ಪೊಂಕುಂ।
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥೨॥

ಪದನಱಿದು ನುಡಿಯಲುಂ ನುಡಿ।
ದುದನಱಿದಾರಯಲುಮಾರ್ಪರಾ ನಾಡವರ್ಗಳ್॥
ಚದುರರ್ನ್ನಿಜದಿಂ ಕುಱಿತೋ।
ದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ ॥೩॥

ಕುಱಿತವರಲ್ಲದೆ ಮತ್ತಂ।
ಪೆಱರುಂ ತಂತಮ್ಮ ನುಡಿಯೊಳೆಲ್ಲಂ ಜಾಣರ್॥
ಕಿಱುವಕ್ಕಳ್ಮಾಮೂಗರು।
ಮಱಿಪಲ್ಕಱಿವರ್ವ್ವಿವೇಕಮಂ ಮಾತುಗಳಂ ॥೪॥

ಜಾಣರ್ಕ್ಕಳಲ್ಲದವರುಂ।
ಪೂಣಿಗರಱಿಯದೆಯುಮಱಿವವೋಲವಗುಣದಾ॥
ತಾಣಮನಿನಿಸೆಡೆವೆತ್ತೊಡೆ।
ಮಾಣದೆ ಪಿಡಿದದನೆ ಕೃತಿಗಳಂ ಕೆಡೆ ನುಡಿವರ್ ॥೫॥

(ಕವಿರಾಜ ಮಾರ್ಗ) —ನೃಪತುಂಗ

## ೧. ಬನವಾಸಿ

ಚಂ॥ ಸೊಗಯಿಸಿ ಬಂದ ಮಾಮರನೆ ತಳ್ತಲೆವಳ್ಳಿಯೆ ಪೂತಜಾತಿ ಸಂ।
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ
ನಲ್ಲರೊಳ್ಮೊಗಮ್॥
ನಗೆ ಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ
ನೋಟಿಮ್ಪೊಡಾವ ಬೆ।
ಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿ
ದೇಶದೊಳ್ ॥೧॥

ಉ॥ ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ।
ಳ್ಗಾಗರಮಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ॥
ನಾಗಿಯುಮೇನೊ ತೀರ್ದಪುದೆ ತೀರದೊಡಮ್ ಮಱು
ದುಂಬಿಯಾಗಿ ಮೇಣ್।
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿ
ದೇಶದೊಳ್ ॥೨॥

(ಭಾರತ) —ಪಂಪ

## ೨. ಹಸ್ತಿನಪುರ

ಸೊಗಯಿಸುತಿರ್ದುದು ಹಸ್ತಿನಪುರವೆಂಬುದು ಪೊಟಲ್
ರಗಳೆ॥ ಅದಱ ಪೊಱವೊಟಲ ವಿಶಾಳ ಕನಕ ಕೃತಕ ಗಿರಿಗಳಿಂ
ಫಳಪ್ರಕೀರ್ಣ ತರುಗಳಿಂ।
ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ
ಪ್ರಸೂನ ರಜದ ಪುಂಜದಿಂ।

ಗಗನ ತಳಮೆ ಪಱಿದು ಬಿೞ್ದುದೆನಿಸ ಬಹುತಟಾಕದಿಂ
ಕುಕಿಲ್ವ ನಲಿವ ಕೋಕದಿಂ ।

ಸುರಿವ ಸುರಯಿಯುರಲ ಮುಗುಳ್ಗೆ ಮೊಗಸಿದಳಿಕುಳಂಗಳಿಂ
ತೊದಲ್ವ ಶಿಶುಶುಕಂಗಳಿಂ ।

ತೆಗೆಯೆ ಬೀರರವದೆ ಮೇಲೆ ಪರಿವ ಮದಗಜಂಗಳಿಂ
ಚಳತ್ತುರಂಗಮಂಗಳಿಂ ।

ಲವಣ ಜಲಧಿ ಬಳಸಿದಂತೆ ಬಳಸಿದಗೞ ನೀಳದಿಂ
ದುದಗ್ರ ಕನಕ ಶಾಳದಿಂ ।

ದೊಳಗೆ ಕುಲನಗಂಗಳೆನಿಪ ದೇವಕುಲದ ಭೋಗದಿಂ
ಸರಾಗಮಾದ ರಾಗದಿಂ ।

ದಿವಮನೇಳಿಪಂತು ಮಿಳಿರ್ವ ವಿವಿಧ ಕೇತನಂಗಳಿಂ
ಸದಾನಿಕೇತನಂಗಳಿಂ ।

ಧನದ ಭವನಮೆನಿಪ ಸಿರಿಯ ಬಚ್ಚರಾಪಣಂಗಳಿಂ
ಪೊದೞ್ದ ಕಾವಣಂಗಳಿಂ ।

ವಿಟಜನಕ್ಕೆ ತೊಡರ್ವ ಚಾರಿಯೆನಿಪ ಸೂಳೆಗೇರಿಯಿಂ
ವಿದಗ್ಧ ಹೃದಯಹಾರಿಯಿಂ ।

ಕನಕಗೋಪುರಂಗಳೊಳಗಣೆರಡು ದೆಸೆಯ ಗುಣಣೆಯಿಂ
ವಿಳಾಸಿನಿಯರ ಗಡಣೆಯಿಂ ।

ಸುರತಸುಖದ ಬಳ್ಳಿವಳ್ಳಿಯೆನಿಪ ಬಳ್ಳಿ ಮಾಡದಿಂ
ಮಹಾ ವಿನೋದ ನೀಡದಿಂ ।

ಕನಕಶೈಲಮೆನಿಸಿ ನೆಗೞ್ದ ಭೂಮಿಪಾಲ ಭವನದಿಂ
ಸಮಸ್ತವಸ್ತುಭುವನದಿಂ ।

(ಭಾರತ) —ಪಂಪ

## ೪. ತನುಜೆಯುಗಲ್ಕೆ

ಚಂ|| ಮನಮುಱಿದಂಜಿ ಬೆರ್ಚಿ ಬೆಸಕೆಯ್ದ‌ರ್ ನಿಜವಲ್ಲಭನೇನಸೆಂದೊಡಂ।
ಕಿನಿಸದಿರೊಂದಿವಗ್ರಮಹಿಷೀಪದದಲ್ಲಿ ಪದಸ್ಥೆಯಾಗು ನಂ ॥
ದನರನಗಣ್ಯಪುಣ್ಯಧನರಂ ಪಡೆಯೆಂದವರ್ದಪ್ಪಿಕೊಂಡು ತ ।
ತ್ತನುಜೆಯುಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ ॥೧॥

ಚಂ|| ಪೊಡೆವಡುವಪ್ಪಿಕೊಳ್ವ ನೆನೆಯುತ್ತಿರಿವೆಂಬ ಸಮಸ್ತವಸ್ತುವಂ
ಕುಡುವ ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ ಬುದ್ಧಿವೇೞ್ವ ಕೈ ।
ಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ
ಮಿಡಿವ ಬಹುಪ್ರಕಾರ ಜನಸಂಕಟವೊಪ್ಪಿದುದಾ ಪ್ರಯಾಣದೊಳ್ ॥೨॥

(ಆದಿಪುರಾಣ) —ಪಂಪ

## ೫. ಅಗ್ರಪೂಜೆ

ಧರ್ಮಪುತ್ರಂ ಪೇೞಿಮಿಾಸಭೆಯೊಳಗ್ರಪೂಜೆಗಾರ್ ತಕ್ಕರೆನೆ ಗಾಂಗೇಯನಿಂತೆಂದಂ—

ಮ॥ ಬಲಿಯಂ ಕಟ್ಟಿದನಾವನೀ ಧರಣಿಯಂ ವಿಕ್ರಾಂತದಿಂದಂ ರಸಾ ।
ತಲದಿಂದೆತ್ತಿದನಾವನಂದು ನರಸಿಂಹಾಕಾರದಿಂ ದೈತ್ಯನಂ ||
ಚಲದಿಂ ಸೀಳ್ದವನಾವನಬ್ಧಿ ಮಥನ ಪ್ರಾರಂಭದೊಳ್ ಮಂದರಾ ।
ಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಜರ್ ತಕ್ಕರೇ ॥೧॥

ವ|| ಎಂದು ತನ್ನ ಮನದೊಳಚ್ಚೊತ್ತಿದಂತೆ ನುಡಿದ ಗಾಂಗೇಯನ ಮಾತಂ ಮನದೇಗೊಂಡು ಯಮನಂದನನಾನಂದಂ ಬೆರಸಂತೆ ಗೆಯ್ವೆನೆಂದು ಪುರುಷೋತ್ತಮಂಗರ್ಘ್ಯಮೆತ್ತಿದಾಗಳ್—

ಕಂ॥ ಮುಳಿದು ಶಿಶುಪಾಲನಾ ಸಭೆ ।
ಯೊಳಗೆ ಮಹಾ ಪ್ರಳಯ ಜಳಧಿ ನಾದದಿನಿರದು ॥
ಚ್ಚಳಿಸಿ ನುಡಿದಂತೆ ಕಳೆ ಕಳೆ ।
ಹರಿಗೆತ್ತಿದನರ್ಘ್ಯದರ್ಘ್ಯಮಂ ಧರ್ಮಸುತಾ ॥೨॥

ತೀವಿದ ನೆರೆಯುಂ ಡೊಳ್ಳುಂ ।
ದೇವವ್ರತನೆನಿಸಿ ನೆಗಳ್ದ ಯಶಮುಂ ಬೆರಸಿ ॥
ನ್ನೀವುದು ಹರಿಗರ್ಘ್ಯಮನೆಂ ।
ದಾವನುಮಾ ಭೀಷ್ಮರಂತು ನುಡಿದರುಮೊಳರೇ ॥೩॥

ಕುರುವೃದ್ಧಂ ಕುಲವೃದ್ಧಂ ।
ಸರಿತ್ಸುತಂ ತಕ್ಕನೆಂದು ನಂಬಿದ ಸಭೆಯೊಳ್ ॥
ದೊರೆಗಿಡಿಸಿ ನುಡಿದೊಡೇನೊಲ ।
ವರಮೆನ್ನದೆ ನೀನುಮದನೆ ಕೊಂಡೆಸಗುವುದೇ ॥೪॥

ಮನದೊಲವರಮುಳ್ಳೊಡೆ ಕುಡು ।
ಮನೆಯೊಳ್ ಹರಿಗಗ್ರಪೂಜೆಯಂ ಯಜ್ಞದೊಳೀ ॥
ಮನುಜಾಧೀಶ್ವರ ಸಭೆಯೊಳ್ ।
ಸೆನೆಯಲುಮಾಗದು ದುರಾತ್ಮನಂ ಬೆಸಗೊಳ್ವಾ ॥೫॥

ಆಳವಱಿಯದೆಗ್ಗು ಬಳವಳ ।
ಬಳೆವಿನೆಗಂ ಪಚ್ಚೆ ಪಸಿಯ ತುಱುಕಾರಂಗ ॥
ಗ್ಗಳಿಕೆಯನೆ ಮಾಡಿ ನೀನುಂ ।
ಪಳಿಯಂ ಕಟ್ಟಿದೆಯೊ ಭೂಪರಿನಿಬರ ಕೊರಲೊಳ್ ॥೬॥

ದೇವರನಡಿಗೆಱಗಿಸಿ ಸಕ ।
ಳಾವನಿತಳದದಟರಂ ಪಡಲ್ವಡಿಸಿದ ಶೌ ॥

ರ್ಯಾವಷ್ಟಂಭದೊಳಾನಿರೆ ।
ಗೋವಳಿಗಂಗಗ್ರಪೂಜೆಯಂ ನೀಂ ಕುಡುವಾ ॥೭॥

ಸಮಕಟ್ಟಲಱಿಯದೆ ಹರಿಗ ।
ರ್ಘ್ಯಮೆತ್ತಿ ನಿಂದಿರ್ದ ಯಜ್ಞಮದು ಮೊದಲೊಳ್ ತಾ ॥
ನಮರ್ದುಮಮರ್ದಿರದೆ ತಣಿಯುಂ ।
ಡಮರ್ದಂ ಗೋಮೂತ್ರದಿಂದೆ ಬಾಯ್ಪೂಸಿದವೋಲ್ ॥೮॥

ಕುಡವೇೞ್ಪನ ಕುಡುವನ ಕುಡೆ ।
ಪಡೆವನ ಪೆಂಪೇಂ ನೆಗೞ್ತೆವಡೆಗುಮೊ ಪೇೞ್ವಂ ॥
ಕುಡವೇೞ್ಗಮ ಕುಡುವಣ್ಣಂ ।
ಕುಡುಗೆಮ ಕುಡೆ ಕೊಳ್ವ ಕಲಿಯನಱಿಯಲ್ಕಕ್ಕುಂ ॥೯॥

ವ॥ ಎಂದನಿತೞೊಳ್ ಮಾಣದೆ ಗೀರ್ವಾಣಾರಿಯಸುರಾರಿಯನಿಂತೆಂದಂ—

ಕಂ॥ ದೊರೆಯಕ್ಕುಮೆ ನಿನಗೆ ಯುಧಿ ।
ಷ್ಠಿರನರ್ಘ್ಯಮನೆತ್ತೆ ಶಂಖದೊಳ್ ಪಾಲೆಱೆದಂ ॥
ತಿರೆ ಮಲಿನಮಿಲ್ಲದೊಳ್ಗ್ಗಲ ।
ದರಸುಗಳಿರೆ ನೀನುಮಗ್ರಪೂಜೆಯನಾಂಪಾ ॥೧೦॥

ಮನದೊಲವರದಿಂದೀ ಯಮ ।
ತನಯನ ಕುಡುವಗ್ರಪೂಜೆ ಮತ್ಸನ್ನಿಧಿಯೊಳ್ ॥
ನಿನಗಶನಿಯ ಮಿೞ್ತುವ ನಂ ।
ಜಿನ ದೊರೆಯೆಂದೊಣರೆ ನಂದಗೋಪಾಲಸುತಾ ॥೧೧॥

ಮನೆ ನಿನಗೆ ನಂದಗೋಪಾ ।
ಲನ ಮನೆ ತುಱುಗಾರ್ತಿ ನಿನಗೆ ಮನೆವೆಂಡಿತಿ ಪ ॥

ಚ್ಚನೆ ಪಸಿಯು ಗೋವನ್ನೈ ಕರ ।
ಮನಯದೆ ನಿನ್ನಳವಿಗಳವನಱಯದೆನೆಗಲೞ್ಗ ॥೧೨॥

ಮುರನಡಸಿ ಪಿಡಿದು ಕಟ್ಟಿದ ।
ಪರಿಭವಮಂ ಮಱೆದೆ ನಿನ್ನ ಪೆಡಗೆಯ್ಗುಟ್ಟಂ ॥
ಶರದಿಂ ಬಿಡಿಸಿದನಲ್ಲನೆ ।
ಸರಿತ್ಸುತಂ ಬನ್ನವಿನ್ನವೆಂಬುವುವೊಳವೇ ॥೧೩॥

ದನುಜಾಂತಕನೆಂಬೀ ನಿ ।
ನ್ನ ನಚ್ಚುವೋದಂಕವೆಲವೊ ಮುನ್ನೆನ್ನನ್ನಂ ॥
ದನುಜಂ ಪುಟ್ಟದೆ ಸಂದುದು ।
ನಿನಗೀ ಪೆಸರೆನ್ನ ಮುಂದೆಯುಂ ಸಂದಪುದೇ ॥೧೪॥

ಆನಿರ್ದ ಸಭೆಯೊಳರ್ಘ್ಯವು ।
ನಾನಲ್ಕಾಟಸಿದ ನಿನ್ನ ಬಿಸುನೆತ್ತರಿನಿಂ ।
ತೀ ನೆರವಿ ನೋಡಿ ಕುಡಿಯದೊ ।
ಡೇಸೋ ಶಿಶುಪಾಲನೆಂಬ ಪೆಸರೆಸೆದಪುದೇ ॥೧೫॥

ಮಱೆದ ಮುಚುಕುಂದನೆಂಬನ ।
ಮಱೆವೊಕ್ಕುದನಂದು ನೀಂ ಜರಾಸಂಧಂಗಂ ॥
ಬಿಱುತೋಡಿದುದಂ ಭೂತಳ ।
ಮಱಯದೆ ನೆನೆಯೆಲವೊ ಗೋವುಗಾದುದು ಪುಸಿಯೇ ॥೧೬॥

ವಿನಾವೆ ಪಂದಿಯೆಂದೆನಿ ।
ತಾನುಂ ತೆಱನಾಗಿ ಡೊಂಬ ವಿದ್ಯೆಯನಾಡಲ್ ॥
ನೀನಱವೆಯುಱದಿದಿಚಿ-ದೊ ।
ದಾಸಱವೆಂ ನಿನ್ನನಿಲ್ಲಿ ದೆಸೆವಲಿಗೆಯ್ಯಲ್ ॥೧೭॥

ಅಱಿಯದಿದಂ ಮಾಡಿದೆನೆ ।
ನ್ನಱಿಯುವಿಕೆಗೆ ಸೈರಿಸೆಂದು ನೀಂ ಸಭೆಯೊಳ್ಕಾ ॥
ಲ್ಗೆಱಗೆಱಗು ಕೊಲ್ಲೆನೆಂದೆರ್ದೆ ।
ತೆಱಿವಿನೆಗಂ ಹರಿಯ ನೆಱನನಸುರಂ ನುಡಿದಂ ॥೧೮॥

ವ॥ ಅಂತು ನುಡಿದು ಕಾಯ್ಪಿನೊಳ್ ಪಿಡುಗಿ ನಡನಡನಡುಗಿ—

ಕಂ॥ ಪೊಳೆದುಳ್ಕುವ ಕುಡು ದಾಡೆಯ ।
ಪೊಳಪು ನೊಸಲ್ಗಡರ್ದು ಪೊಡರ್ವ ಪುರ್ವೆಸೆವಿನವು ॥
ವ್ವಳಿಸುವ ಮುಳಿಸಿನ ದಳ್ಳುರಿ ।
ಗಳನುಗುೞ್ವವೊಲುಗುೞ್ದನಸುರನುರಿವ ಪೞಿಗಳಂ ॥೧೯॥

ವ॥ ಆಗಳ್ ಸಭಾಸದರೆಲ್ಲಮೆವೆ ಮಿಡುಕದೆ ಪಂದೆಯಂ ಪಾವಡರ್ದವೊ
ಲುಸಿರದಿರೆ ನಾರಾಯಣಂ ಶಿಶುಪಾಲನನಿಂತೆಂದಂ—

ಕಂ॥ ನಿನ್ನಯ ತಾಯ್ ಸಾತ್ವತಿಯುಂ ।
ನಿನ್ನಂ ತಂದೆನ್ನ ತೊಡೆಯಮೇಲಿೞಿಪುವುದುಂ ॥
ನಿನ್ನ ಲಲಾಟದ ಕಣ್ಣದು ।
ಮುನ್ನಮೆ ಕಿಡೆ ನಿನ್ನ ಮೃತ್ಯುವೆನ್ನಯ ಕೆಯ್ಯೊಳ್ ॥೨೦॥

ನೆಱೆದುದನಱಿದೀ ಕಿಱಿಯವ ।
ನಱಿಯದೆ ಕೆಡೆ ನುಡಿದನಪ್ಪೊಡಂ ನೂಱುವರಂ ॥
ನೆಱೆ ಸಲಿಸುವುದೆಂದುದನಾಂ ।
ಮಱೆವೆನೆ ಬಯ್ ಬಯ್ಯೆ ಸಲಿಸುವೆಂ ನೂರುವರಂ ॥೨೧॥

ಮುನಿಯಲೆನಗಾಗ ಗಾಂಗೇ ।
ಯನಿರ್ದನಿರ್ದಂ ಘಟೋದ್ಭವಂ ನೆಗೞ್ದ ಪೃಥಾ ॥

ತನಯುರುಮಿರ್ದರ್ ದುರ್ಯೋ ।
ಧನನಿರ್ದಂ ಕೇಳೆ ಪೇೞ್ವರಾ ಬಲ್ಲವರುಂ ॥೨೨॥

ಎನೆಯೆನೆ ಬಾಯ್ಗಂ ಬಂದನಿ ।
ತನಿತುಮನವುರಾರಿ ಬಲ್ಮೆ ಸೈರಿಸಿ ಸೂಜಿಂ ॥
ಬನಿತುವರಂ ಮನ್ನಿಸಿ ನಸು ।
ಕಿನಿಸದೆ ಮಿಗೆ ಕಿನಿಸಿ ದಿತಿಜಕುಳದವದಹನಂ ॥೨೩॥

ಮುಳಿದು ತನಗರ್ಘ್ಯವೆತ್ತಿದ ।
ತಳಿಗೆಯೊಳಿಡೆ ಶಿಱಿದ ತೆಱದೆ ತಲೆ ಪಱಿದಾಗಳ್ ॥
ಕಳಕಳಿಸಿ ನಗುತಮಿರ್ದುದು ।
ತಳಿಗೆಯ ಮೇಲಸುರನದಟದೇನಚ್ಚರಿಯೋ ॥೨೪॥

(ಭಾರತ) —ಪಂಪ

## ೬. ವನ

ಕಂ॥ ಅಮಿತಗುಣವರ್ಣನಪ್ರ ।
ಕ್ರಮುಕ್ಕೆ ಸಲೆ ನಾಣ್ಚಿ ತಲೆಯುನೆಱಗಿದ ಸುಜನೋ ॥
ತ್ತಮರಂಗೆ ಭರದಿನೆಱಗಿದು ।
ವಮೇಯು ಪರಿಪಕ್ವ ಗಂಧಶಾಲಿವನಂಗಳ್ ॥೧॥

ತತ್ಕಳಮುಕಣಿಶಕಬಳಸ ।
ಮುತ್ಕ ಶುಕ ಪ್ರಕರವೆಸೆಯೆ ಪೊಸ ನೇತ್ರದ ಚಂ ॥
ಚತ್ಕಂಚುಕಮುನಿಳಾವಿಳ ।
ಸತ್ಕಾಮಿನಿ ತೊಟ್ಟ ಪೋಲ್ಪೆಯುಂ ಪುಟ್ಟಿಸುಗುಂ ॥೨॥

ಬಹುಪೋಷಣದಿವ್ಯಾವಿನ।
ಸಹಕಾರದ ಸೊನೆಯು ಸೋನೆ ಬೆಳೆಯಿಸೆ ಬೆಳೆಗುಂ ॥
ಮುಹಿಯೆನೆ ಬಣ್ಣಿಸುವ ಪಿತಾ ।
ಮುಹಂಗಮರಿದೆಗ್ಗ ಮೊಗ್ಗೆ ನಿನಗಮುಪೆನಗಂ ॥೩॥

ನವ ಶಶಿಕಳೆಗಳನಮೃತ ।
ದ್ರವಂಗಳೊಳ್ ತೀವಿ ತೀವಿ ನಿಱಿಸಿದರೆನೆ ತ ॥
ದ್ಧವಳೇಕ್ಷು ಲಕ್ಷ್ಮಿ ನಡೆ ನೋ ।
ಡುವ ಜನಪದ ಜನದ ಮನಮನಱಿ ಸೆಱಿವಿಡಿಗುಂ ॥೪॥

(ಶಾಂತಿಪುರಾಣ) —ಪೊನ್ನ

# ೭. ದುರ್ಯೋಧನನ ಸ್ನೇಹಹೃದಯ

ನೆಗಪಿ ವರೂಥಮಂ ವಸುಧೆ ನುಂಗಿದುದಂ ಸಮಪಾದದಾಸನಂ
ಬಗೆಗೊಳೆ ತನ್ನ ಮುಂತೆಗೆದ ಮುಷ್ಟಿಯೆ ದಕ್ಷಿಣಕರ್ಣಮೂಲದೊಳ್
ಸೊಗಯಿಸೆ ಪಾಱಿಯಂ ನೆಱಿಪದಾಳ್ವನ ಕಜ್ಜಮನೊಕ್ಕು ಸತ್ತ್ರಂ
ನಗುವವೊಲಿರ್ದನಂಗಪತಿ ನೆಮ್ಮಿ ನಿಜೋನ್ನತಕೇತುದಂಡಮಂ ॥೧॥

ಅಂತಿರ್ದ ದಿನಕರತನೂಜನಂ ರಾಜರಾಜಂ ನೋಡಿ ಬಾಷ್ಪವಾರಿ
ಧಾರಾಪೂರಿತಲೋಚನನುಂ ಮನ್ಯುದ್ಗತಕಂಠನುಂ ಅಸಹ್ಯಶೋಕಾನಲ-
ದಹ್ಯಮಾನಾಂತಃಕರಣನುಮಾಗಿ—

ಆನುಂದುಶ್ಶಾಸನನುಂ।
ನೀನುಂ ಮೂವರೆ ದಲಾತನುಂ ಕಱಿದ ಬಱಿ॥

 ಹೂಮಾಲೆ

ಕ್ಕಾನುಂ ನೀನೆ ದಲೀಗಳ್।
ನೀನುಮಗಲ್ದಿತ್ತವ್ರೋದೆಯಂಗಾಧಿಪತೀ ॥೨॥

ನಿನ್ನ ಮಗಂ ವೃಷಸೇನಂ।
ತನ್ನ ಮಗಂ ಸತ್ತನಣ್ಮೈ ಲಕ್ಷ್ಮಣನುಂ ಸೀ ॥
ನೆನ್ನಂ ಸಂತೈಸುವುದಾಂ।
ನಿನ್ನಂ ಸಂತೈಸೆ ಬಂದೆನಂಗಾಧಿಪತೀ ॥೩॥

ಅಱಿಯೆನಿದಂ ನಿನ್ನಿಂದಿನ।
ತೆಱನಂ ನೀನೆನಗೆಯೇಕೆ ಮುಳಿದಿರ್ದೆಯೋ ಮೇಣ್॥
ಮಱುಮಾತುಗುಡದೆ ರವಿಸುತ।
ಮಱವಿಂದಿರ್ದಪೆಯೋ ಮೇಣ್ ಬೞಲ್ದಿರ್ದಪೆಯೋ ॥೪॥

ನಿನ್ನ ಕಳೆಯುಂ ಸುಯೋಧನ-।
ನನ್ನೋಡದೆ ನುಡಿಯದಪ್ಪಿಕೊಳ್ಳದೆ ಬೆಸನೇ ॥
ನೆನ್ನದೆ ಜೀಯೆನ್ನದೆ ದೇ।
ವೆನ್ನದೆಯೇಕುಸಿರದಿರ್ದೆಯಂಗಾಧಿಪತೀ ॥೫॥

ಅನೃತಂ ಲೋಭಂ ಭಯಮೆಂಬ।
ಬಿನಿತುಂ ನೀಸಿರ್ದ ನಾಡೊಳಿರ್ಕುಮೆ ರವಿನಂ ॥
ದನ ನನ್ನಿ ಚಾಗಮಣ್ಮೆಂ।
ಬಿಸಿತರ್ಕಂ ನೀನೆ ಮೊತ್ತಮೊದಲಿಗನಾದಯ್ ॥೬॥

ಆನಱಿವೆಂ ಪೃಥೆಯಱಿವಳ್।
ದಾನವರಿಪುವಱಿವನರ್ಕನಱಿವಂ ದಿವ್ಯ॥
ಜ್ಞಾನಿ ಸಹದೇವನಱಿವಂ।
ನೀನಾರ್ಗೆಂದಾರುಮಱಿಯರಂಗಾಧಿಪತೀ ॥೭॥

ಒಡವುಟ್ಟಿದನೆಂದಱಿದೊಡೆ।
ಕುಡುಗುಂ ರಾಜ್ಯಮನೆ ಧರ್ಮತನಯಂ ನಿನಗಾಂ॥
ಕುಡಲಾರ್ತೆ ನಿಲ್ಲ ರಾಜ್ಯ।
ಕ್ಕೊಡೆಯನನಱಿಯುತ್ತುಮಿರ್ದೆನಂಗಾಧಿಪತೀ ॥೮॥

ನೀನುಳ್ಳೊಡುಂಟು ರಾಜ್ಯಂ।
ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟಯ್॥
ನೀನುಳ್ಳೊಡುಂಟು ಪೀಱಿಗೆ।
ನೀನಿಲ್ಲದವೆಲ್ಲಮೊಳವೆ ಅಂಗಾಧಿಪತೀ ॥೯॥

ಹರಿ ಬೇಡೆ ಕವಚಮಂ ನೀ-।
ನರಿದಿತ್ತಯ್ ಕೊಂತಿ ಬೇಡೆ ಬೆಗಡದೆ ಕೊಟ್ಟಯ್॥
ಪುರಿಗಣೆಯಂ ನಿನಗೆಣೆ ಕಸ ।
ವರಗಲಿ ಮೆಯ್ಗಲಿಯುಮಾವನಂಗಾಧಿಪತೀ ॥೧೦॥

ನಯನದೊಳಮೆರ್ದೆಯೊಳಂ ನಿ-।
ನ್ನಯ ರೂಪಿರ್ಪುದು ನಿನ್ನ ಮಾತಿರ್ಪುದೆ ॥
ನ್ನಯ ಕಿವಿಯೊಳಮಿನನಂದನ।
ವಿಯೋಗಮೆಂತಾದುದಱಿಯೆನಂಗಾಧಿಪತೀ ॥೧೧॥

ನಿನ್ನಂ ಕೊಂದ ಕಿರೀಟಿಯು-।
ಮೆನ್ನಣುಗನನಿಕ್ಕಿ ಕೊಂದ ಭೀಮನುಮೊಳನಾ ॥
ನಿನ್ನುಮೊಳೆಂ ಗಡ ಸಾಲದೆ।
ನಿನ್ನಯ ಕೂರ್ಮೆಗಮುದೆನ್ನ ಸೌಧರ್ಮಿಕೆಗಂ ॥೧೨

ಇಂದಾನಾಪೆಂ ಮೇಣಿನ-।
ನಂದನ ಕೇಳ್ ಪಾಂಡುತನಯರಾದರ್ ನಿನ್ನಂ॥

ಕೊಂದುಂ ದುಶ್ಶಾಸನನಂ।
ಕೊಂದುಂ ಬರ್ದುಕುವನದಾವನಂಗಾಧಿಪತೀ ॥೧೩॥

ಎಂದು ವಿಪ್ರಳಾಪಂಗೆಯ್ದು

ಇನಸುತನಿರವಂ ದುಶ್ಶಾ-।
ಸನನಿರವಂ ಕಂಡುಮಿನ್ನುಮೆನ್ನಸು ತಾಂ ನೆ-॥
ಟ್ಟನೆ ಪೋದುದಿಲ್ಲ ಕಲ್ಲೆರ್ದೆ-।
ತನದಿಂದೆನ್ನಂತು ಬರ್ದ ನಾವನುಮೊಳನೇ ॥೧೪॥

ಎಂದು ತನ್ನಂ ತಾನೆ ನಿಂದಿಸಿಕೊಂಡು

ಸೂನುಗಳಳಿವಂ ಪ್ರಿಯಮಿ-।
ತ್ರಾನುಜರಳಿವಂ ವಿಧಾತ್ರ ನೀಂ ಕಾಣಿಸಿಯುಮಿ ॥
ನ್ನೇನಂ ಕಾಣಿಸಲಿರ್ದಪೆ।
ನೀನೆನ್ನಂ ಪಾಪಕರ್ಮನಂ ನಿರ್ಗುಣಿಯಂ ॥೧೫॥

ಕೆಳೆಯಂಗಾಯ್ತು ಸುಮೋಕ್ಷಮಾಗದೆನಗಂ ಬಾಷ್ಪಾಂಬುಮೋಕ್ಷಂ ಧರಾ।
ತಳಮಂ ಕೊಟ್ಟನಿವಂ ಜಳಾಂಜಳಿಯುಮಂ ನಾಂ ಕೊಟ್ಟೆನಿಲ್ಲನ್ಯಮಂ-॥
ಡಳಮಂ ಸುಟ್ಟನಿವಂ ಪ್ರತಾಪಶಿಖಿಯಿಂದಾನೀತನಂ ಸತ್ಕ್ರಿಯಾ।
ನಳನಿಂ ಸುಟ್ಟೆನುಮಿಲ್ಲ ಮತ್ಪ್ರಿಯತಮಂ ಕರ್ಣಂಗಿದೇಂ ಕೂರ್ತೆನೋ ॥೧೬॥

(ಗದಾಯುದ್ಧ) —ರನ್ನ

## ೮. ಭೀಮ-ದುರ್ಯೋಧನರ ಗದಾಯುದ್ಧ

ವಾರಣರಕ್ತಸಿಕ್ತ ಮೃಗರಾಜಯುಗಕ್ಕೆ ನವಪ್ರಸೂನ ರಾ।
ಗಾರುಣ ಕಿಂಶುಕದ್ರುಮಯುಗಕ್ಕೆ ಸಧಾತುಕಭೃದ್ಯುಗಕ್ಕೆ ಸಿಂ।
ದೂರಿತಗಂಧಸಿಂಧುರಯುಗಕ್ಕೆಣೆಯೆಂಬಿನಮಣ್ಮಿ ಕಾದಿದರ್।
ಕೌರವರಾಜನುಂ ಕುರುಕುಲಾಂತಕನುಂ ರುಧಿರಾರ್ದ್ರ ಮೂರ್ತಿಗಳ್ ॥೧॥

ಕರಿಯುಂ ನುಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದುಗೊಳ್ ಮತ್ಸಹೋ
ದರರಂ ಕೋಪದೆ ತಿಂದುದರ್ಕೆರಡುಗೊಳ್ ದುಶ್ಶಾಸನೋರಃಸ್ಥಳ ॥
ಕ್ಷರದಸ್ರಾಂಬುವನಾರ್ದು ಪೀರ್ದ ಮುಳಿಸಿಂಗಂ ಮೂಱುಗೊಳ್ಳೆಂದು ಮ-।
ತ್ಸರದಿಂದೋವದೆ ಪೊಯ್ದನೆತ್ತಿ ಗದೆಯಂ ದುರ್ಯೋಧನಂ ಭೀಮನಂ ॥೨॥

ಎಂದು ಮುಟ್ಟೆ ಮೂದಲಿಸೆ

ಇದು ಲಾಕ್ಷಾಗೇಹದಾಹಕ್ಕಿದು ವಿಷಮವಿಷಾನ್ನಕ್ಕಿದಾ ನಾಡಜೂದಿಂ।
ಗಿದು ಪಾಂಚಾಲೀಪ್ರಪಂಚಕ್ಕಿದು ಕೃತಕಸಭಾಳೋಕನಭ್ರಾಂತಿಗೆಂದೋ ॥
ವದೆ ಪೊಯ್ದಂ ಕಾಲ್ಗಳಂ ತೋಳ್ಗಳನಗಲುರಮಂ ಕೆನ್ನೆಯಂ ನೆತ್ತಿಯಂ ಕೋ-।
ಪದಿನಯ್ದುಂ ದುರ್ನಯಕ್ಕಯ್ದೆಡೆಯನುರುಗದಾದಂಡದಿಂ ಭೀಮಸೇನಂ॥೩॥

ಚರಣಾಕ್ರಾಂತಂ ಮಹೀಮಂಡಲಮಡಿರೆ ಭುಜಾಕ್ರಾಂತಮಾಶಾ
ಗಜೇಂದ್ರೋ।
ತ್ಕರಮಾಶಾಭಿತ್ತಿಯಿಂದಂ ಪೆಱದೆಗೆಯೆ ಗದಾಕ್ರಾಂತಮುದ್ಭ್ರಾಂತವಿದ್ಯಾ-।
ಧರಚಕ್ರಂ ಗೆಂಟುಗೆಂಟಾಗಿರಿಸೆ ನಿಜವಿಮಾನಂಗಳಂ ಭೈರವಾಡಂ-।
ಬರಮಾ ಕಲ್ಪಾಂತಕಾಲಂ ನೆಗೞ್ದುದು ಸಮರಂ ಭೀಮದುರ್ಯೋಧನೀಯಂ॥೪॥

ನೆಲಸಿದ ಬಿನ್ನಣಂ ಸೋಸಿ ಬಿನ್ನಣಂ ಗೆಲೆ ಕಾಣ್ಕೆ ಕಾಣ್ಕೆಯುಂ।
ಗೆಲೆ ಜವಮುಂ ಜವಂ ಗೆಲೆ ಬಲಂ ಬಲಮುಂ ಗೆಲೆ ದಂಡೆ ದಂಡೆಯಂ॥

ಗೆಲೆ ಮುಳಿಸುಣ್ಮೆ ಪೊಣ್ಮೆ ಮುಳಿಸಂ ಗೆಲೆ ಸತ್ವದಳುರ್ಕೆ ಸತ್ವಮಂ।
ಗೆಲೆ ಗೆಲಲಾರ್ತರಿಲ್ಲ ಕುರುಪಾಂಡುತನೂಭವರೊರ್ವರೊರ್ವರಂ ॥೫॥

ಅಂತು ನೆಱಲೊಳ್ ಪೋರ್ಕುಳಿಯಾಡುವಂತೊರ್ವರೊರ್ವರಂ ಗೆಲಲ್ ನೆಱೆಯದಿರೆ ದುರ್ಯೋಧನಂ ಕರಂ ಮುಳಿದು

ಕುರುರಾಜಂ ವಿದ್ಯಾಧರ ।
ಕರಣದೆ ನೆಗೆದಂಬರಕ್ಕೆ ಗದೆಯಂ ಕ್ರಮದಿಂ ॥
ತಿರಿಪೆ ಧರಾಚಕ್ರಂ ಕೋ ।
ವರಚಕ್ರಂ ತಿರಿವ ತೆಱದೆ ತಿರಿದತ್ತೆನಸುಂ ॥೬॥

ಅಂತು ಮೂದಲಿಸದೆ ಇಱಿವುದು ತುಱುಲಾಯ್ತುಮಲ್ಲೆಂದು ಮುಟ್ಟೆ ಮೂದಲಿಸಿ

ತೆಱಪಂ ನಿಟ್ಟಿಸಿ ಕುರುಪತಿ
ಬಱಸಿಡಿಲೆಱಗುವವೊಲೆಱಗಿ ಪೊಯ್ಯಲೊಡಂ ಮೆಯ್ ॥
ಮಱೆದು ಪವನಜನದೇಂಕೆ-।
ದಱೆಯೆಂ ಮತಿವಿಕಳನಾಗಿ ಮೂರ್ಛೆಗೆ ಸಂದಂ ॥೭॥

ಅಂತು ಕುಲಿಶಾಭಿಘಾತದೊಳ್ ನೀಲಾಚಲಮೆ ಕೆಡೆವಂತೆ ಕೆಡೆದು ಮೂರ್ಛಾಗತನಾಗಿರ್ದ ಭೀಮಸೇನನಿರವಂ ಕಂಡು ಗಾಂಡೀವಿ ಕೋಪಾತುರಾಟೋಪಮಂ ತಾಳ್ದಿ

ಎಲ್ಲಿಯ ಬಲದೇವಂ ಮ-।
ತ್ತೆಲ್ಲಿಯ ಸತ್ಯವ್ಯವಸ್ಥೆ ದುರ್ಯೋಧನನಂ॥
ಕೊಲ್ಲದಿರೆನೆಂದು ಭಾರತ ।
ಮಲ್ಲಂ ಗಾಂಡಿವಕೆ ನೇಱಿದಂ ನೆಱೆ ತಿರುವಂ ॥೮॥

ಮುಳಿದೇವಂ ಹಲಿ ಕೃಷ್ಣಂ।
ಮುಳಿದೇವಂ ಧರ್ಮನಂದನಂ ಮುಳಿದೇವಂ॥
ಮುಳಿದರನಿಕ್ಕುವೆನೆಂದು ।
ಮ್ಮಳಿಸಿದರಿಱಿಯಲ್ಕೆ ನಕುಲ ಸಹದೇವರ್ಕಳ್ ॥೯॥

ಅರಿಗಿಂಬಾಯ್ತುಱಿವಾದುದು।
ಮರುತ್ಸುತಂಗರ್ಜುನಾದಿಗಳ್ ಮುಳಿದರ್ ಮೂ ॥
ವರುಮೆನ್ನ ನನ್ನಿಗೀಗಳಿ।
ಪರಿಭವವಾಯ್ತೆಂದು ಧರ್ಮಜಂ ಚಿಂತಿಸಿದಂ ॥೧೦॥

ಅಲರ್ದ ಹಲಧರನ ಮೊಗಮುಂ।
ತಲೆಯುಂ ಬಾಗಿರ್ದ ಧರ್ಮತನಯನ ಮೊಗಮುಂ॥
ಜಲರುಹನಾಭಂ ಕಂಡೆರ್ದ।
ಕಲಂಕಿ ಕಣ್ಜರ್ಬು ಜರ್ಬಿದಂ ಗಾಂಡಿವಿಯುಂ ॥೧೧॥

ಆ ಪ್ರಸ್ತಾವದೊಳ್ ಧಾತುನಿರ್ಜರಗಿರಿ ಕೆಡೆವಂತು ಕೆಡದಿರ್ದ ಪಗೆಯುಂ ನೋಡಿ ಧರ್ಮಯುದ್ಧಮಂ ನೆನೆದು

ಇಱಿಯೆಂ ಬಿಟ್ಟಿನನೆಂಬೀ।
ಬಿಱುಬಿಂದಂ ಬೀಸೆ ಗದೆಯ ಗಾಳಿಯ ಕೋಳೆ ॥
ಟ್ಟಿಱಿಸಿದುದು ಭೀಮನಂ ಮೆಯ್ಯ್ ।
ಮಱೆದವನಂ ತಂದೆ ಸುತರ್ಗೆ ಕೂರದರೊಳರೇ ॥೧೨॥

ಅಂತು ಮೂರ್ಛೆಯಿಂ ಮಾರುತಿಯೆಟ್ಟಿತ್ತಾಗಳ್

ಪೊಡೆಯಲರಾತಂ ರಾಗದೆ।
ತೊಡೆಯಂ ಪೊಯ್ದಾರ್ದ ನೆವದೆ ನೆಱನೀತಂಗೀ ॥

ಯೆಡೆಯೆಂದು ತೋಱಿ ಕುಡೆ ಪೊಲ।
ಗಿಡದಱಿಂದಂ ಪರಮಸಂಡಿತಂ ಪವನಸುತಂ ॥೧೩॥

ತಿಳಿದಾಗಳ್ ನೆಱನಿಂತುಟೆಂದು ನೆಲನಂ ಮಾಱುದ್ದಿ ಕಯ್ಯಿಂ ಧರಾ।
ತಳದೊಳ್ ಸೂಸಿದ ತನ್ನ ·ತೀವ್ರಗದೆಯುಂ ಕಂಡೆತ್ತಿಕೊಂಡಂಬರ॥
ಸ್ಥಳದಿಂದಂ ಸಿಡಿಲೇಱಿ ಗಿಯಿಂದೆಱಗಿ ಪೊಯ್ವಾಗಳ್ ಗದಾದಂಡದಿಂ।
ಮುಳಿದಿಟ್ಟಂ ಕಲಿ ಸತ್ತಿಗಂ ಕುರುಕುಭೃಚ್ಚಂಡೋರುದಂಡಂಗಳಂ ॥೧೪॥

ಇಡೆ ತೊಡೆಯನುಡಿದು ನೆಟ್ಟನೆ।
ಕೆಡೆಯುತ್ತುಂ ಕರ್ಚಿ ನೆಲನನಾನಿದನೆಂತುಂ॥
ಬಿಡೆನೆಂಬ ತೆಱದೆ ಕುಲಗಿರಿ।
ಕೆಡೆವಂದದೆ ಕೆಡೆದು ಕೌರವೇಂದ್ರಂ ಮಡಿದಂ ॥೧೫॥

ಅಂತು ದಿಕ್ಕರಿಕರಾನುಕಾರಿಗಳಪ್ಪ ನಿಜಭುಜಸ್ತಂಭಂಗಳಿಂ ಕುರುಕುಲ ಮಹೀಶನ ಕದಳೀಸ್ತಂಭಂಗಳನನುಕರಿಸುವ ತೊಡೆಗಳನುಡಿದು ಅಶ್ರಮ ದೊಳ್ ಪುಡಿಯೊಳ್ ಪೊರಳ್ಚಿ ತನ್ನ ಮುನ್ನ ನುಡಿದೂರುಭಂಗಪ್ರತಿಜ್ಞೆಯಂ ತೀರ್ಚಿ ಮಕುಟಭಂಗಪ್ರತಿಜ್ಞೆಯಂತೀರ್ಚಲೆಂದು ಕುರುಕುಲಾಂತಕಂ ಮಾಮಸಕಂ ಮಸಗಿ

ಇದು ಭುವನಾಧಿಪತ್ಯಸವನೋದಕದಿಂ ಗಡ ಪೂತಮಾದುದಿಂ ।
ತಿದು ಧವಳಾತಪತ್ರದ ನೆೞಲ್ಗೆ ಗಡಂ ಗುಱಿಯಾದುದಾರ್ಗಮಿಂ ॥
ತಿದು ಗಡ ಬಾಗದೀ ತಲೆಗೆ ತಕ್ಕುದನೀಗಳೆ ಮಾೞ್ಪೆನೆಂದು ಕೋ-।
ಪದಿನೊದೆಯಲ್ಕೆ ಸಾರ್ತರೆ ಹತೋರುಸಪತ್ನ ಕಿರೀಟಶೃಂಗಮಂ ॥೧೬॥

ಬಲದೇವಾದಿಗಳಾಗದಾಗದೊದೆಯಲ್ಕೇಕಾದಶಾಕ್ಷೋಹಿಣೀ ।
ಬಲ ಲಕ್ಷ್ಮೀಪತಿಯಂ ಪರಾಭವಿಸದಿರ್ ಚಿಃ ತಕ್ಕುದಲ್ಲೆಂದು ಮಾ ॥

ಕೆರ್ೞಳಲುಂ ಮಾಣದೆ ಭೀಮಸೇನನೊಡೆದಂ ವಾಮಾಂಘ್ರಿಯಿಂ ರತ್ನಮಂ
ಡಲರಶ್ಮಿಪ್ರಕಟಜ್ವಲನ್ಮಕುಟಮಂ ಕೌರವ್ಯರಾಜೇಂದ್ರನಾ ॥೧

ಅಂತು ಗುಣರತ್ನಾರ್ಣವಂ ತೀರ್ಣಪ್ರತಿಜ್ಞಾರ್ಣವನುಮಾಗೆ

ಸುರತರು ಕುಸುಮೋತ್ಕರಮಂ।
ಸುರಿಯೆ ಸುರಾಂಗನೆಯರೆಸೆಯೆ ಸುರದುಂದುಭಿಗಳ್॥
ಪರಮಾಶೀರ್ವಚನ ಪರಂ ।
ಪರೆಯಿಂದಂ ಮೆಚ್ಚಿ ಪರಸಿದರ್ ಸತ್ತಿಗನಂ ॥೧

(ಗದಾಯುದ್ಧ) —ರನ್ನ

## ೯. ವೈರಾಗ್ಯ

ತನು ತಾಳಲಾಱದನ್ನೆಗ।
ಮೆನಸುಂ ನೀನದಱೊಳಾತ್ಮಶಕ್ತಿಕ್ಷಯಮು॥
ಪ್ಪಿನೆಗಮಿರಲ್ಕಕ್ಕುಮೆ ಕಟಾ।
ದ ನೀರ್ಗೆ ಬಂದಪುದೆ ಬಱಿಕ ಜರೆಗಂ ತಿರ್ದಲ್ ॥೧

ಎನಿತೆಸಿತು ಕಟಾದಭವಮಂ।
ನೆನೆದಪೆಯೆನಿತೆನಿತು ಭವದಬಂಧುಗಳಂ ನೀಂ॥
ನೆನೆದಪೆಯೆನಿತೆನಿತೊಡಲಂ।
ನೆನೆವಪೆಯೆಲೆ ಜೀವ ನೀನೆ ಪೇೞ್ ಪವಣೊಳವೇ ॥೨

ಎನಿತಂ ಕುಕ್ಕುಟಿಗುದಿದಪೆ।
ಯೆನಿತಂ ತಕ್ಕಳಗಱಲ್ದಪೈ ಜೀವನೆ ನೀ॥
ನೆನಿತಂ ಮಲ್ಮಲ ಮಱುಗುವೆ।
ಯೆನಿತಂ ಸಂಸಾರದೊಳಗೆ ತಿಱ್ರನೆ ತಿರಿವೈ ॥೩

 ಹೂವು

ಕಡೆಯಿಲ್ಲದ ಸಂಸಾರದ।
ಕಡೆಗಾಣಲ್ಬಗೆವೆಯುಪ್ಪೊಡೆನ್ನುಕ್ತಿಗೊಡಂ॥
ಬಡು ಜೀವ ನಿನ್ನ ಕಾಲಂ।
ಪಿಡಿವೆಂ ಧರ್ಮಮನೆ ಮಗುಳೆ ಬಲ್ವಿ ವಿಡಿಯಾ ॥೪॥

(ಅಜಿತ ಪುರಾಣ) —ರನ್ನ

## ೧೦. ಮಹಾಶ್ವೇತೆ ಪುಂಡರೀಕರ ಪ್ರಣಯ

[ಮಹಾಶ್ವೇತೆ ತಾನು ಪುಂಡರೀಕನಲ್ಲಿ ಅನುರಕ್ತೆಯಾದುದನ್ನು ಚಂದ್ರಾಪೀಡನಿಗೆ ಹೇಳುತ್ತಾಳೆ.]

ಎಸೆವ ವಸಂತಮಾಸದೆ ವಸಂತಮನಾಂತ ಕುಜಾತಪಲ್ಲವ।
ಪ್ರಸರದಿನಾ ವಸಂತಸಮಯಂ ಕುಸುಮಾವಳಿಯಿಂದೆ ಪಲ್ಲವಂ॥
ವಿಸುಪಳಿಮಾಲೆಯಿಂ ಕುಸುಮಮಂಜರಿ ರಂಜಿಸುವಂತಿರಲ್ ವಿಜೃಂ।
ಭಿಸಿದುದು ಯೌವನೋದಯ ವಿಲಾಸಮನುಕ್ರಮದಿಂ ಮದಂಗದೊಳ್ ॥೧॥

ಆಗಳೊರ್ಮೆ ವಸಂತದೊಳುಳ್ಳಲರ್ದ ನವನಳಿನ ಕುಮುದ ಕುವಲಯ ಕಲ್ಹಾರಂಗಳಿಂ ಕಣ್ಗೊಳಿಪಚ್ಛೋದಸರಸಿಗೆ ಜನನಿವೆರಸು ಮಜ್ಜನಕ್ಕೆಂದು ನಡೆತಂದು ನೋಟ್ಪಲ್ಲಿ ಮುಂಡೆ ಮುನಿಕುಮಾರನೊರ್ವನೆಯ್ತರುತಿರೆ

ಕರತಳವೊಂದಱೊಳ್ ಮಣಿಕಮಂಡಲು ನಾಳಸಮೇತಮಪ್ಪ ಕೇ।
ಸರಫಲದಂತಿರಿರ್ದುದು ಮನೋಜವಿನಾಶದಿನಟ್ಟಿ ತನ್ಮನೋ॥
ಹರಿಯ ಪೊದಳ್ದ ಕಣ್ಬನಿಗಳಂತಮಲಸ್ಫಟಿಕಾಕ್ಷಮಾಲೆ ಸುಂ।
ದರತರಮಾದುದೊಂದು ಕರಪಲ್ಲವದೊಳ್ ಮುನಿಪಾಗ್ರಗಣ್ಯನಾ ॥೨॥

ತನಗನುರೂಪಮೆಂಬಿನೆಗವೊರ್ವ ಕುಮಾರತಪಸ್ವಿ ದೇವತಾ।
ರ್ಚನೆಗೆ ವನಕ್ಕೆ ಬಂದು ಪೊಸವೂಗಳನಟ್ಟಿಯೊಳಾಯ್ದು ಕೊಯ್ದು ಬೆ॥

ನ್ನನೆ ಬರಲೀ ವನಾಂತರಸರೋವರದಲ್ಲಿಗೆ ವಿಹಾಯಲೆಂದು ಮೆ।
ಲ್ಲನೆ ಬರುತಿರ್ದ ತನ್ಮುನಿಕುಮಾರನನಾಂ ಬಿಡೆ ನೋಡಿದೆಂ ನೃಪಾ

ಸಿರಿ ನಲವಿಂದಮಿರ್ಪ ನೆಲೆ ಕಣ್ಗಳ ಪರ್ವಮೆನಿಪ್ಪ ಪಂಕಜೋ।
ತ್ಕರಮುಮನಿಂದುಮಂಡಲಮುಮಂ ಮೊದಲೊಳ್ ಸಮೆದಬ್ಜಜಂ ಮನೋ।
ಹರಮೆನೆ ಮಾಡಿದೀ ಮೊಗದ ಪೋಲ್ವೆಗೆ ಮುನ್ ನೆಗಲಿಲ್ ತಗುಳ್ಚಿ ಬಿ।
ತ್ತರಿಸಿದನಲ್ಲದಿಂತು ಸಮವಸ್ತುಗಳಂ ಪಡೆವಂತು ಗಾಂಪನೇ

ಎಂದು ಭಾವಿಸಿ

ನವಯೌವನದೊಳ್ ಗುಣದೋ।
ಷವಿಚಾರಮನಿಂತು ಮಾಡಲೀಯದ ಭಾವೋ॥
ದ್ಭವನಿಂ ಪರವಶೆಯಾದೆಂ।
ನವ ಕುಸುಮಾಸವದೆ ಸೋರ್ಕಿದಳಿನಿಯ ತೆಱದಿಂ

ನಿಯತೇಂದ್ರಿಯನೊಳ್ ತೇಜೋ।
ಮಯನೊಳ್ ರೂಪೈಕಪಕ್ಷಪಾತದೆ ನೆಱೆ ನೀ॥
ತಿಯನುೞಿದು ಮುನಿಪನೊಳ್ ನಿ।
ರ್ಭಯನಂಗಜನೆನ್ನ ನಿಂತಿರಲ್ ಸೋಲಿಕುಮೇ

ಪಲಬರ್ ಕಾಂತೆಯರೊಲ್ದು ಪೋಪರೊಳರೆಂತುಂ ಕಾಂತರೊಳ್ ಬೇಟಮ।
ಗ್ಗಲಿಸಲ್ ಕಾಣದೆ ಲಜ್ಜೆಗೆಟ್ಟರೊಳರಿಂತೀಲೋಕದೊಳ್ ರೂಪುಗಾ॥
ಣಲೊಡಂ ತೊಟ್ಟನೆ ಲಜ್ಜೆಗೆಟ್ಟಱವುಗೆಟ್ಟೆನ್ನಂತೆ ಕಣ್ಗೆಟ್ಟು ಪೇ।
ಟಿಸೊಲವಿಂದಿಃತೆರ್ದೆಗೆಟ್ಟರಾರೆನುತುಮತ್ಯೌತ್ಸುಕ್ಯಮಂ ತಾಳ್ದಿದೆಂ

ಅಂತಾಶ್ಚರ್ಯಮಂ ತಳೆದು ನನ್ನ ನಾನೆ ಸಂತೈಸಿ

ಎನ್ನೆವರಂ ಸಚೇತನೆಯೆನೆನ್ನೆವರಂ ಲಗುವಾಗದಿರ್ಪೆನೋ।
ಅನ್ನೆಗವಿಾಗಳೀಯೆಡೆಯಿನಾಂ ತೊಲಗಿರ್ಪುದು ಕಜ್ಜಮಲ್ಲದಂ॥
ದೆನ್ನಯ ಮನ್ಮಥೋಚಿತವಿಕಾರಮನೀಕ್ಷಿಸಿ ಸೋಲ್ತುಳಕ್ಕಟಾ।
ಎನ್ನದೆ ಶಾಪಮಂ ಕುಡುವನಂತುಟೆ ಕೋಪಿಗಳಲ್ತೆ ತಾಪಸರ್ ॥೮॥

ಎಂದು ಪೋಗಲುದ್ಯೋಗಂಗೆಯ್ದು ನಿಖಿಳಜನಪೂಜಾರ್ಹರನವಜ್ಞೆಗೆಯ್ಯಲಾಗದೆಂದು

ತೊಳಗುವ ಚಿನ್ನಪೂಗಳಲಕಾವಳಿಯೊಳ್ ಮಿಱುಗಲ್ ಕಪೋಲಮಂ।
ಡಳತಲದೊಳ್ ತೆಱಂಬೊಳೆಯೆ ಕೋಮಲಪಲ್ಲವ ಕರ್ಣಪೂರ ಮಂ॥
ಜುಳಮಣಿಕುಂಡಲಂ ಪೆಗಲೊಳಾಡೆ ಮರಳ್ದೆಯೆಯಿಕ್ಕದಾಂ ಮನಂ।
ಗೊಳಿಪ ಮುನೀಂದ್ರನಾನನಮನೀಕ್ಷಿಸುತುಂ ಪೊಡವಟ್ಟೆನಳ್ಕಱಿಂ ॥೯॥

ತದನಂತರಂ

ಮದನಂ ದುರ್ಜಯನಿಂದ್ರಿಯಂಗಳನಿವಾರ್ಯಂಗಳ್ ವಸಂತಂ ಮದ।
ಪ್ರದನಾ ಸ್ಥಾನವತೀವರಮ್ಯಮೆನಗಂ ದುಃಖಂಬರಲ್ವೇಳ್ಕುಮ॥
ಪ್ಪುದಱಿಂ ಭಾವಿಸಿ ಮದ್ವಿಕಾರಮನೆ ನೋಡುತ್ತಿರ್ಪುದುಂ ಗಾಳಿಗೊ।
ಡ್ಡಿದ ದೀಪಾಂಕುರದಂತೆ ತನ್ಮುನಿಯುಮಂ ಕಾಮಂ ಚಲಂ ಮಾಡಿದಂ ॥೧೦॥

ಅಂತು ಮಾಡೆ

ಪೆಸರೇನಾರ್ಗೀತನೀ ಜವ್ವನಿಗ ತವಸಿ ತೊಟ್ಟಿರ್ಪ ಕರ್ಣಾವತಂಸಂ।
ಪೊಸತೀಲೋಕಕ್ಕಿದಾವಂಘ್ರಿಪದ ಪೊಳೆವ ಪೂಗೊಂಚಲಿಂದಾದುದೋ ನೀಂ॥
ಬೆಸಸಲ್ವೇೞ್ಕುಂತಿದಂ ಕೌತುಕಮೆನೆನಗೆನುತ್ತುಂ ನಮಸ್ಕಾರಪೂರ್ವಂ।
ಬೆಸಗೊಂಡೆಂ ತನ್ಮುನೀಂದ್ರಾನುಚರಮುನಿಯನಾನಂದತಿಪ್ರೀತಿಯಿಂದಂ ॥೧೧॥

ಅಂತು ಬೆಸಗೊಳೆ

ಬೆಸಗೊಳ್ವುದಱಿಂದಿದನು।
ದ್ದೆಸವಾವುದು ತರುಣಿ ನಿನಗೆ ಕೌತುಕವೆನೆ ಕೇ॥
ಳುಸಿರ್ದಪೆನೆಂದಾ ಮುನಿಪಂ।
ನಸುನಗುತುಂ ಪೇೞಲಾಗಳುದ್ಯತನಾದಂ ॥೧೨॥

ಅದೆಂತೆನೆ ಶ್ವೇತಕೇತು ಮಹಾಮುನಿಗಂ ಲಕ್ಷ್ಮಿಗಂ ಕುಮಾರಂ ಪುಂಡರೀಕ-
ನೆಂಬೊನೀತಂಗೆ ಶೈಶವಂ ಪತ್ತುವಿಡಲೊಡಮಖಿಳವಿದ್ಯಾಕಲಾಪದೊಳ್
ಪರಿಣತನಂ ಮಾಡಿ ಯತಿತ್ವಮುಂ ಕಯ್ಕೊಳಿಸೆ ತದನುಷ್ಠಾನ ಪರಾಯಣನಾದ
ಮಹಾನುಭಾವನೀತಂಗೀ ವ್ರತವಿರುದ್ಧಮಪ್ಪ ಕುಸುಮಮಂಜರಿಯೆಂತು ಬಂದು
ದೆಂಬೆಯಪ್ಪೊಡೆ

ಇಂದು ಚತುರ್ದಶಿಯಪ್ಪುದ।
ಱಿಂದಂ ಕೈಲಾಸವಾಸಿಯಂ ಕಾಣಲ್ಕಾ॥
ನಂದದೆ ದಿವದಿಂದಿರ್ಬರು।
ಮೊಂದಾಗಿ ಬರುತ್ತಮಿರ್ಪುದುಂ ತತ್ಕ್ಷಣದೊಳ್ ॥೧೩॥

ಬನದೇವತೆಯೊರ್ವಳ್ ಬಂದು ಪೊಡವಟ್ಟು ಭುವನತ್ರಯಾಭಿರಾಮಮಪ್ಪ
ನಿನ್ನ ಸೌಕುಮಾರ್ಯಕ್ಕೆ ತಕ್ಕಲಂಕಾರಮೀ ದಿವ್ಯಕುಸುಮಮಂಜರಿಯು ನವ
ತಂಸಂಮಾಡಿ ಪಾರಿಜಾತಜನ್ಮಮುಂ ಸಫಲಂಮಾಳ್ಪುದೆಂದು ಬಿನ್ನವಿಸೆ ನಿಜ
ರೂಪಸ್ತುತಿಗೆ ಲಜ್ಜಿಸಿ ಕೇಳದಂತೆ ಪೋಗೆ ಮತ್ತಂ ಬೆನ್ನನೆ ಪತ್ತಿ ಬರುತಿರ್ಪ
ದುಮಾಂ ಕಂಡು ಕಾರುಣ್ಯದಿಂದೀ ಕಾಂತೆಗೆ ಸಂತೋಷಂಮಾಡಿಮೆನಲಿದೇಕೆ
ಬೇಡವೇಡೆನೆಯುಂ ಕಿವಿಯೊಳ್ ತೊಡರ್ಚಿ ಪೋದಳೀ ಕುಸುಮಮಂಜರಿ
ಯನೆಂದು ಸಹಚರಮುನಿ ಪೇೞೆ ಪುಂಡರೀಕಂ ದರಹಸಿತಾರ್ಧಕಪೋಲ
ತಲನಾಗಿ

ಎಳಸುತ್ತಿರ್ದಪೆ ಪುಷ್ಪಮಂಜರಿಗೆ ಕೊಳ್ಳೀ ಸುತ್ತಿದೇಕೆಂದು ಸಂ।
ಚಳಿಸುತ್ತುಂ ನಿಜಕರ್ಣದಿಂ ತೆಗೆದು ಸೋಲ್ತಿಂ ಕೂಡು ನೀನೆನ್ನೊಳಿಂ॥

ದಳಿವಾಲಾರವದಿಂದೆ ಪೇೞ್ವ ತೆಱದಿಂ ಮತ್ಕರ್ಣದೊಳ್ ತಾರಕೋ।
ಜ್ವಳಮಂ ರಂಜಿಪ ಪುಷ್ಪಮಂಜರಿಯನತ್ಯೌತ್ಸುಕ್ಯದಿಂದಿಕ್ಕಿದಂ ॥೧೪॥

ಇಂ ಪೇೞ್ವುದೇನನೆನ್ನ ಕ।
ದಂಪಿನ ನಸುಸೋಂಕಿನೊಂದು ಸುಖದಿಂದಾದಂ॥
ಕಂಪಿಸುತಿರೆ ಕರತಳದಿಂ।
ದಂ ಪೋದತ್ತಕ್ಷಮಾಲೆ ನಾಣ್ಬೆರಸಾಗಳ್ ॥೧೫॥

ಅಂತು ಪೋದೊಡವಂಱಿಯದಿರಲಾನಾ ಅಕ್ಷಾವಳಿಯಂ ನೆಲಕೆ ಬೀೞ್ವನಂ ಪಿಡಿದು ತೊಳಗುವ ಹಾರಮಂ ತಳೆವಂತೆ ಕೊರಲೊಳ್ ತಳೆದು ಸುಖಮಂ ತಳೆಯಲಿಂತಾ ವ್ಯತಿಕರದೊಳೆನ್ನಂ ಛತ್ರಧಾರಿಣಿ ನೋಡಿ

ತಡೆದಿರಲಾಗದಿಂತು ಮೊಗಮಜ್ಜನಮಂ ನೆಱೆಮಾಡಿ ದೇವಿಯರ್।
ನಡೆಗೊಳಲಿರ್ದಪರ್ ಮನೆಗೆ ಮಜ್ಜನಕೀಗಳೆ ರಾಜಪುತ್ರಿ ನೀಂ॥
ನಡೆವುದೆನುತ್ತುಮಿಚ್ಚೆಯಣಮಿಲ್ಲದೊಡಂ ತೆಗೆದಳ್ ಕರಂ ಮನಂ।
ಕಿಡೆ ಪೊಸತಪ್ಪದೊಂದು ಪಿಡಿಗಂಕುಶಮಿಟ್ಟು ಮರಳ್ಚುವಂದದಿಂ ॥೧೬॥

ಅಂತವಳೆನ್ನನಿಂತಾನುಂ ತೆಗೆಯಲೊಡನೆಯೆ ಕುಮಾರನಾತನ ಧೈರ್ಯ-ಸ್ಖಲನೆಯಂ ನೋಡಿ

ಎನಗನುರೂಪಮಲ್ತಿದು ನಿಕೃಷ್ಟಜನೋಚಿತ ಮಾರ್ಗಮೆಂಬಿದಂ।
ಮನದೊಳಣಂ ವಿಚಾರಿಸದೆ ಸೈರಣೆಗೆಟ್ಟಱವೆತ್ತ ಪೋದುದೆಂ॥
ಬಿನದಮೆರ್ದೆಗೆಟ್ಟು ಮೆಯ್ಯಱಿಯದಂತಿರಲಕ್ಕುಮೆ ಪುಂಡರೀಕ ಭೋಂ।
ಕನೆ ನಿನಗೀಗಳಿಂದ್ರಿಯದ ಡಾವರವೆತ್ತಣಿನೆತ್ತ ಬಂದುದೋ ॥೧೭॥

ಎಲ್ಲಿತ್ತೊ ಧೈರ್ಯಮುಪಶಮ।
ಮೆಲ್ಲಿತ್ತೊ ಜಿತೇಂದ್ರಿಯತ್ವಗುಣಮೆಲ್ಲಿತ್ತೋ॥

ಎಲ್ಲಿತ್ತೊ ನಿನ್ನ ಶೌರ್ಯಮು।
ದೆಲ್ಲಿತ್ತುಪಭೋಗ ರಾಗವಿಷಯ ದ್ವೇಷಂ ॥೧೮॥

ಅತಿಶಯದಿಂ ವಿಷಯಾಸ।
ಕ್ತತೆ ನಿನ್ನನ್ನರುಮನಿಂತು ಮಾಡಿತ್ತೆನಲಿನ್॥
ಮತಿ ನಿಷ್ಫಲವಾಗಮ ಸಂ।
ತತಿ ನಿರ್ಗುಣಮುಱಿವು ನಿಷ್ಪ್ರಯೋಜನಮಲ್ತೇ ॥೧೯॥

ಎಂತು ಗಡ ನಿನ್ನ ಕಯ್ಯಿಂ।
ದಂ ತೊಟ್ಟನೆ ಬಿೞ್ದ ಜಪದ ಮಣಿಯುಮನೆಲೆ ಮುಂ॥
ದಂತುಯ್ಯಲಱಿಯೆಯೆನಲಿ।
ನ್ನಿಂತಿರೆ ನಿನ್ನಂತೆ ವಿಗತಚಿತ್ತರುಮೊಳರೇ ॥೨೦॥

ಆದಱಿನಿನ್ನಾದೊಡಂ ನಿನ್ನ ಮನಮಂ ನೀಂ ನಿಲಿಸಿಕೊಳ್ಳೆಂದು ನುಡಿಯೆ ಲಜ್ಜಿತನಾದಂತೆ ಗೆಯ್ದು

ಬೆಸೆದು ಕಪಿಂಜಲ ನೀಂ ಭಾ।
ವಿಸದಿರ್ ಬೇಱೊಂದು ತೆಱನನವಳೆನ್ನಂ ವಂ॥
ಚಿಸಿದಪರಾಧಮನಾಂ ಸೈ।
ರಿಸುವೆನೆ ನೋಡೆನುತುಮೆೞ್ದು ಪುಸಿಮುಳಿಸಿದಂ ॥೨೧॥

ಕುಡು ಚಪಳೆ ಜಪದ ಮಣಿಯಂ।
ಕುಡದಿನ್ನೊಂದಡಿಯನಪ್ಪೊಡಂ ಪೋಗದಿರೆಂ॥
ದೊಡೆ ಕೇಳ್ದು ಜಪದ ಮಣಿಗೆ।
ತ್ತೊಡನೆಯೆ ಹಾರಮನೆ ತೆಗೆದೆನೆನ್ನಯ ಕೊರಲಿಂ ॥೨೨॥

ಅಂತು ತೆಗೆದು ಕುಡುವುದುಮಾತನುಂ ಮನ್ಮುಖಾಸಕ್ತ ದೃಷ್ಟಿಯಿಂ ಮಯ್ಯಱಿಯದಕ್ಷಾವಳಿಗೆತ್ತು ಕಳೆದುಕೊಳ್ವುದುಮಾನಾಗಳಲ್ಲಿಂ ತಳರ್ದು

ಕೆಳವಳಿಸಿ ಬೆಮುತ್ತಗಳ್।
ಕೊಳದೊಳ್ ವಿಾಯಲ್ಕತಿಪ್ರಯತ್ನದಿನುಯ್ವರ್॥
ಕೆಳದಿಯರೆಂತಾನುಂ ತೆಗೆ।
ದಳವಿಲ್ಲದೆ ಬಂದ ನದಿಯನಿದಿರೇಱುವೊಲ್ ॥೨೩॥

(ಕಾದಂಬರಿ) --ನಾಗವರ್ಮ

# ೧೧. ಚಂದ್ರಾಪೀಡ ಕಾದಂಬರಿಯರ ಪ್ರಥಮ ಸಮಾಗಮ

[ಮಹಾಶ್ವೇತೆ] ಚಂದ್ರಾಪೀಡನನಿಂತೆಂದಳ್

ಇದೆ ಸಾರಿರ್ಪುದು ರಾಜಧಾನಿ ಪಿರಿದುಂ ಚಿತ್ರಾವಹಂ ಬಂದು ನೋ।
ಟ್ಪುದು ನೀನೆನ್ನೊಡಸಂದು ಮತ್ಸಖಿಗಮೆಂತುಂ ಬುದ್ಧಿ ವೇಟಲ್ಕೆ ವೇ॥
ಟ್ಪುದು ಮತ್ಪ್ರಾಣಸಮಾನೆಯಾಕೆ ನಿಜದಿಂದಸ್ಪೃಷ್ಟ ಗಂಧರ್ವಲೋ।
ಕದೊಳಿಂದಕ್ಕೆ ಭವದ್ವಿಲೋಕನಸುಖಂ ಭೂಪಾಲವಿದ್ಯಾಧರಾ ॥೧॥

ಆದಲ್ಲದೆಯುಂ ಮದೀಯಪ್ರಾರ್ಥನೆಯುಂ ನಿರರ್ಥಕಂ ಮಾಡದಿಂದು ಬಂದಲ್ಲಿ ವಿಶ್ರಮಿಸಿ ನಾಳೆ ಬೀಡಿಂಗೆ ಬಿಜಯಂಗೆಯ್ವುದೆಂದು ಮತ್ತಮಿಂತೆಂದಳ್

ನಿನ್ನನಕಾರಣಬಾಂಧವ।
ನಂ ನೋಡಿಯೆ ಶೋಕವಾಱಿದುದು ಸುಜನರಲೋ॥
ಕೋನ್ನತರ ಪರಹಿತರ ನಿ।
ಮ್ಮನ್ನರ ಬರವಾರ್ಗೆ ಸುಖಮನುತ್ಪಾದಿಸದೋ ॥೨॥

ಎಂದು ನುಡಿದೊಡೆ

ಇನಿತಂ ಪ್ರಾರ್ಥಿಸಲೇಂ ನೀ।
ನಿನಿತೆಸಗುವುದೆಂದು ಬೆಸಸುವುದು ಸಾಲ್ಗುಂ ನೀ॥
ಮೆನಗೆಂದು ವಿನಯದೊಳ್ ಕಾ।
ಮಿನಿ ಪಿಂತನೆ ನಡೆವನಂದು ಚಂದ್ರಾಪೀಡಂ ॥

ಅಂತು ಬರುತ್ತುಂ ಹೇಮಕೂಟಮನೆಯ್ದಿ ವಿಚಿತ್ರಮೆನಿಸಿದ ಚಿತ್ರರಥರಾಜ
ಧಾನಿಯಂ ಪೊಕ್ಕು ಸಪ್ತಕಕ್ಷ್ಯಾಂತರಂಗಳ ಕಾಂಚನಮಯತೋರಣಂಗಳಂ
ನುಸುಳ್ದು ಕನ್ಯಾಂತಃಪುರದ್ವಾರಮನೆಯ್ದಿವರ್ಪಾಗಳ್

ಇದು ನಾರೀಮಯಮಪ್ಪ ಲೋಕಮಿದು ಬೇಱೊಂದಂಗನಾದ್ವೀಪಮಿಂ।
ತಿದು ನಿಷ್ಪೂರುಷಜೀವಲೋಕಮಿದು ಸರ್ಗಕ್ಕೆಂದು ಪದ್ಮೋದ್ಭವಂ॥
ಸುದತೀರತ್ನಸಮೂಹಮಂ ಪದಪಿದಿಂ ಬಯ್ಚಿಟ್ಟ ಭಂಡಾರಮಿ।
ಪ್ಪುದೆನಲ್ ಸಂದಣಿಸಿರ್ದ ಸುಂದರಿಯರಂ ಕಂಡಂ ನರೇಂದ್ರಾತ್ಮಜಂ ॥

ಎರಡುಂ ಪಕ್ಕದೊಳೋಲಗಕ್ಕೆ ಪದಪಿಂ ಬಂದಿರ್ದ ಕಾಂತಾಜನೋ।
ತ್ಕರರತ್ನಾಭರಣ ಪ್ರಭಾಪ್ರಸರಮಾದಂ ತಳ್ತು ತದ್ವೀಥಿಕಾಂ॥
ತರದೊಳ್ ಪೆರ್ಬೊನಲಂದದಿಂ ಪರಿಯೆ ಕಂಡಂತಾ ಪ್ರಭಾಪೂರದೊಳ್।
ಭರದಿಂ ತಾನಿದಿರೀಸುವಂತೆ ನಡೆದಂ ಭೂಪಾಲ ವಿದ್ಯಾಧರಂ ॥

ಪೊಳೆಯುತ್ತಿರ್ಪ ಮಹಾವರಾಹವದನೋದ್ಯದ್ದಂಷ್ಟ್ರಮಂ ಸೆಮ್ಮಿ ನಿಂ।
ದಳೆ ಭೂಕಾಂತೆಯನಲ್ಕೆ ನೀಲವಸನಪ್ರಚ್ಛನ್ನ ಪರ್ಯಂಕಮಂ॥
ಡಳದೊಳ್ ಬೆಳ್ಪೆಸೆದಿರ್ದ ಕಾಳುಡೆಯನೊಂದಂ ಸೆಮ್ಮಿ ಕುಳ್ಳಿರ್ದ ಕೋ।
ಮಳೆಯಂ ದೂರದೆ ನೋಡಿ ಕಂಡನರಸಂ ಕಾದಂಬರೀದೇವಿಯಂ ॥

ಅಂತಿರ್ದ ಗಂಧರ್ವರಾಜನಂದನೆಯನತಿದೂರದೊಳ್ ವಿಸ್ಮಿತಾಂತರಂಗನಾಗಿ
ನೋಡಿ

ಇವಳಂ ನೋಡಲ್ ಪಡೆದೆ।
ನ್ನ ವಿಲೋಚನಮಾವ ನೋಂಪಿಯಂ ನೋಂತುವೊ ಮಾ॥

ಯ್ದ ವಿಧಾತ್ರಸೇಕೆ ವಿರಚಿಸಿ।
ಸೊ ವಿಲೋಚನಮಯುಮೆನಲ್ ಪಂಚೇಂದ್ರಿಯಚಯಮಂ ॥೭॥

ಬಗೆಯೊಳ್ ಪಿರಿದುಂ ಕೌತುಕ।
ಮೊಗೆಯಲ್ಕನ್ಯೋನ್ಯಮೊಲ್ದು ನೋಡುತ್ತಿರ್ಪ॥
ನ್ನೆಗಮೊರ್ವೊರ್ವರಲಿರ್ವರ ದಿ।
ಟ್ಟಿಗಳುಂ ಸಮದಿಟ್ಟಿಯಾದುವಂತಾ ಕ್ಷಣದೊಳ್ ॥೮॥

ಅಂತು ನೋಡಿ

ಈತಂ ಕೇಯೂರಂ ಪೇ।
ಳ್ದಾತಂ ಪುಗುತರ್ಪನೆಂದೆನುತ್ತುಂ ತದ್ರೂ॥
ಪಾತಿಶಯಕ್ಕಚ್ಚರಿವ।
ಟ್ಟಾ ತರುಣಿಯುಮಂತೆ ಬಿಡದೆ ನೋಡುತ್ತಿರ್ದಳ್ ॥೯॥

ಒದವೆ ಪುಲಕಾಂಕುರಂಗಳ್।
ಮೊದಲೊಳ್ ಭೂಷಣದ ರವಮೆರಡನೆಯ ಸೂಟಿಬ್ ಮ॥
ನ್ನಿದಿರೇಟಿ ತಾಂ ಬಟಿಕ್ಕಿರ।
ದಿದಿರೆಟ್ದಳ್ ತರಳನಯನೆ ಸಂಭ್ರಮದಿಂದಂ ॥೧೦॥

ಪಲವು ದಿವಸಕ್ಕೆ ಕಂಡೊಗೆ।
ದೊಲವಿಂ ಜಿಗಿಯಪ್ಪಿದಳ್ ಮಹಾಶ್ವೇತೆಯನಾ॥
ಲಲನೆ ಮಹಾಶ್ವೇತೆಯುಮಾ।
ಲಲನೆಯನನುರಾಗದಿಂದಮಪ್ಪಿದಳಾಗಳ್ ॥೧೧॥

ಅನಂತರಂ ಮಹಾಶ್ವೇತೆ ಕಾದಂಬರಿಯನಿಂತೆಂದಳ್ ಚಂದ್ರಾಪೀಡನೆಂಬೀ
ಮಹಾನುಭಾವಂ ಭಾರತವರ್ಷದ ರಾಜನುಂ ಕ್ಷಪಿತ ಪ್ರಜಾಪೀಡನುಮೆನಿಸಿದ

ತಾರಾಪೀಡನರೇಂದ್ರಂಗೆ ನಂದನಂ ದಿಗ್ವಿಜಯ ಪ್ರಸಂಗದಿಂ ಬಟಿಸಂದೀ ಪ್ರ
ಶಕ್ಕೆ ಬಂದನಲ್ಲದೆಯುಂ ಪರಿತ್ಯಕ್ತಸಕಲಸಂಗೆಯಾಗಿ ಕಲ್ಲೆರ್ದೆಯಾಗಿಸಿಸಿದೆನ
ಕಾಣಲೊಡನೆ ಸ್ವಭಾವಸರಳತೆಯನಪ್ಪಕಯ್ದು ನಿಜಗುಣದಿಂ ನಿಷ್ಕಾರಣ ಬ
ವುಂ ನಿರ್ನಿಮಿತ್ತಮಿತ್ರನುಮೆನಿಸಿದನೀ ಮರ್ತ್ಯಲೋಕದ ಸಫಲತೆಯುಮಂ ಸೌಜ
ಗ್ಯದ ಭಾಗ್ಯಮುಮಂ ಮನುಷ್ಯರಗ್ರಾಮ್ಯತೆಯುಮಂ ನೀನುಂ ಕಾಣ್ಬೆಯೆಂದ
ತಾನುಮಿಲ್ಲಿಗೊಡಗೊಂಡು ಬಂದೆಂ

ಅರಸನನಾಂ ಕಂಡಜುಯೆಂ।
ಪರಿಚಯಮಿಲ್ಲೆನ್ನೊಳೆಂದು ಮಿಗೆ ತಾಂ ನಾಣ್ಚು॥
ತ್ತಿರದಿಂದೆನ್ನೊಳದೆಂತಂ।
ತಿರೆ ನೀಂ ನೆಗಟ್ಟುದು ನಿರಂತರಂ ಕಮಲಮುಖೀ ॥೧

ಎಂದು ಮಹಾಶ್ವೇತೆ ಕಾದಂಬರಿಗಜುಪುವುದುಂ ಚಂದ್ರಾಪೀಡನುಂ ಕಯ್ಗ
ಮುಗಿಯೆ ಸರ್ವಾಂಗಪುಳಕಮಂ ತಳೆದು

ಸಿರಿದೊಂದಟ್ಟಿಜುಳೊಲ್ದು ನೋಟ್ಟವಳ ದೀರ್ಘಾಪಾಂಗದೇಶಕ್ಕೆ ಚೆ।
ಚ್ಚರಮಾಗಳ್ ಪರಿತಂದ ಸೇದೆಯೊದವಲ್ ಘರ್ಮೋದಬಿಂದೂತ್ಕರಂ॥
ಸುರಿಯುತ್ತಿರ್ದುದು ಕಣ್ಣ ಪಾಪೆಗೆಲೆ ನೋಡೆಂಬಂದದಿಂ ಸ್ನೇಹನಿ।
ರ್ಭರವಾ ಕಾಂತೆಗೆ ಭೋಂಕೆನಲ್ ಸುರಿದುದಾನಂದಾಶ್ರು ಬಿಂದೂತ್ಕರಂ ॥೧

ಅನಂತರಂ ಪರಿಜನಂ ಸಂಭ್ರಮಂಬೆರಸು ತಂದು ಶಯನತಳಶಿರೋಭಾ
ದೊಳಿಕ್ಕಿದ ಹೇಮಪದಾಂಕಿತಾಸನದೊಳರಸಂ ಕುಳ್ಳಿರೆ ಕಾದಂಬರಿ ಮಹಾಶ್ವೇ
ಯೊಡನೆ ನಿಜಪರ್ಯಂಕದೊಳ್ ಕುಳ್ಳಿರ್ದುದುಂ ಮಹಾಶ್ವೇತೆಯ ಕಣ್ಣಜು
ವೇಣುರವಂಗಳುಮಂ ವೀಣಾನಾದಂಗಳುಮಂ ಗೀತಸ್ವನಂಗಳುಮಂ ಮಾಗ
ಯರ ಜಯಶಬ್ದಂಗಳುಮಂ ಪ್ರತೀಹಾರಿಯರ್ ನಿವಾರಿಸುತ್ತುಮಿರ್ದರನ್ನೆ

ಪ್ರಿಯದಿಂ ಕಾಂತೆ ಮಹಾಶ್ವೇ।
ತೆಯ ಕಾಲಂ ತಾನೆ ಕರ್ಚಿಪದಪಿಂದೆ ನಿಜ॥

ಪ್ರಿಯಸಖಿಯೆನಿಸಿದ ಮದಲೇ।
ಖೆಯೆಂಬಳಿಂ ನೃಪನ ಕಾಲ್ಗಳಂ ಕರ್ಚಿಸಿದಳ್ ॥೧೪॥

ಅನಂತರಂ ತಾಂಬೂಲಪ್ರದಾನೋದ್ಯತೆಯಾದ ಕಾದಂಬರೀದೇವಿಯಂ ಮಹಾಶ್ವೇತೆಯಿಂತೆಂದಳ್

ಭುವನಾಧೀಶ್ವರಸುತನಭಿ।
ನವಾಗತಂ ಮಾನ್ಯನಪ್ಪನಾರಾಧ್ಯನೆ ದಲ್॥
ನವಗೆಲ್ಲ ತೆಱದಿನದಱಿಂ।
ದವೀವುದರಸಂಗೆ ಮುನ್ನಮಿಾ ತಂಬುಲಮಂ ॥೧೫॥

ಎಂದು ನುಡಿಯೆ

ಆನಕ್ಕ ನಾಣ್ಚುವೆಂ ಪಿಡಿ।
ನೀನೆ ನೃಪಂಗಿಕ್ಕು ತಂಬುಲಮನಱಿವೆನೆ ಪೇ॥
ೞೀನುಮನಾನೆಂದತಿ ಲ।
ಜ್ಜಾನತಮುಖಿಯಾಗಿ ಕಾಂತೆ ಮೆಲ್ಲನೆ ನುಡಿದಳ್ ॥೧೬॥

ಅಂತು ನುಡಿಯೆ ಮಹಾಶ್ವೇತೆ ಮತ್ತಮಾಗ್ರಹಿಸೆ ತಂಬುಲಂಗುಡಲುಜ್ಜುಗಂಗೆಯ್ದು

ಬೆಮರಿಂ ಮುಱುಗಿದಪೆಂ ಸಂ।
ಭ್ರಮದಿಂ ಬಿಟ್ಟಪ್ಪೆನರಸ ಕಯ್ಗುಡು ನೀಂ ಬೇ॥
ಗಮೆನಿಪ್ಪ ತೆಱದೆ ತಾಂಬೂ।
ಲಮಿಳಿತಮಂ ಕಾಂತೆ ನೀಡಿದಳ್ ನಿಜಕರಮಂ ॥೧೭॥

ಆಗಳ್ ಪಂಚೇಂದ್ರಿಯ ವೃತ್ತಿಗಳ್ ಬೇಱೆಬೇಱೆರೂಪಂದಳೆದುವೆನಿಪಂಗುಳಿಗಳಿಂ ಮನಂಗೊಳಿಸುವ ಕರಕಮಲಂಗಳಂ ಚಂದ್ರಾಪೀಡಂ ನೀಡೆ

ಎನಸುಂ ಮುಂದೆ ಸಾಖಾಂಶು ನಿಳ್ಕೆ ನೃಪಹಸ್ತಾಸ್ಪರ್ಶನಂಗೆಯ್ವವೋಲ್।
ನಿನಗೆನ್ನಂ ಬಿಡದುಣ್ಮುತೀ ಬೆಮರೆ ಕಯ್‌ನೀರಾಗಿರಲ್ ತೋರ್ಕೆಗೊ॥
ಟ್ಟನನಂಗಂ ಪಿಡಿ ನಿನ್ನ ಕಯ್ಯೆಡೆಯನೊಂದಿರ್ದಪ್ಪುದಿನ್ನೆನ್ನ ಜೀ।
ವನವೆಂಬಂದದಿನಿಕ್ಕಿದಳ್ ನಡುಗುತುಂ ತನ್ನಂಗಿ ತಾಂಬೂಲಮಂ ॥೧೮॥

(ಕಾದಂಬರಿ) --ನಾಗವರ್ಮ

## ೧೨. ರಾವಣನ ಪರಾಂಗನಾವಿರತಿ

ನಳಕೂಬರನ ಕುಲಾಂಗನೆ।
ವಿಳಾಸವತಿ ರಾವಣಂಗೆ ಪಲಕಾಲಂ ಮು॥
ನ್ನೆಳಸಿರ್ಪ ಕಾಮುಕಾತರೆ।
ಕೆಳದಿಗೆ ತಿಳಿವಂತು ತನ್ನ ತೆಱನಂ ಪೇೞ್ದಳ್ ॥೧॥

ಅಂತು ವಿದ್ಯಾಧರ ಪರಮೇಶ್ವರಿ ಚಿತ್ರಮಾಲೆಗೆ ನಿಜಾಭಿಪ್ರಾಯಮಂ ಕಲಿಸಿ
ರಾವಣನಲ್ಲಿಗಟ್ಟುವುದುಂ

ನೀಲಪಟಚ್ಛದೆ ನಿಶೆಯೊಳ್।
ಲೋಲೇಕ್ಷಣೆ ಗಗನಮಾರ್ಗದಿಂ ರಾವಣನಿ॥
ರ್ದಾಲಯಮಂ ವಿಜಯಶ್ರೀ।
ಲೀಲೆಯಿನಾ ಚಿತ್ರಮಾಲೆ ಬಂದೊಳಪೊಕ್ಕಳ್ ॥೨॥

ಅಂತು ಪೊಕ್ಕು ರಾವಣನ ಕೆಲಕ್ಕೆ ವಂದು

ಉಪರಂಭೆಯೆಂಬಳೆಮ್ಮರ।
ಸಿ ಪೋಲಪೊಡೆ ರಂಭೆಗಗ್ಗಳಂ ಚೆಲ್ವಿಂದಾ॥

ರುಪವೊಗೆ ಪೆಱರೆನಿಪಳ್ ಪೀ।
ನ ಪಯೋಧರೆ ನಿನ್ನ ಸಾರ್ಕೆಗಟ್ಟಿದಳೆನ್ನಂ ॥೩॥

ಪಲವು ದಿನಂ ನಿನ್ನೊಳ್ ತೊ।
ಟ್ಟೊಲವಿಂದಾ ಚೆನ್ನೆ ನಿನ್ನನನವರತಂ ಪಂ॥
ಬಲಿಸುತ್ತುಂ ಚಿತ್ತೋದ್ಭವ ।
ನಲರಂಬುಗಳುರ್ಜೆ ನಾಡೆ ಪಾಡೞಿಳಿರ್ದಳ್ ॥೪॥

ಏವೊಗೞ್ವನತನುವಿದ್ಯಾ।
ದೇವತೆ ನಿರತಿಶಯುವೆನಿಪ ರೂಪಿಂ ವಿದ್ಯಾ॥
ದೇವತೆ ಸಾಮರ್ಥ್ಯದಿನೆನಿ।
ಪಾ ವಧು ಬರೆ ದೇವ ನಿನಗೆ ತೀರದುದುಂಟೇ ॥೫॥

ಎನೆ ದಶಾನನಂ ಪೞಿಯುಂ ಪಾಪಮುಮಪ್ಪ ದುಶ್ಚರಿತ್ರಮನೇವೆನೆಂದು ಮನದೊಳೆ ನಿಶ್ಚಯಿಸಿ ವಿಭೀಷಣನಂ ಬರಿಸಿ ರಹಸ್ಯದೊಳದನಱಿಪುವುದುಮಾತಂ ವಿದ್ಯಾಪ್ರಾಕಾರಮುಂ ಕಿಡಿಸುವಂತುಟಂ ಪ್ರತಿವಿದ್ಯೆಯನಾಕೆಯುಂ ಬರಿಸಿ ಪುಸಿದು ನಂಬಿಸಿ ಕಲ್ತುಕೊಳ್ವುದೆನೆ ರಾವಣನಾ ದೂದವಿಗೆ ನಿನ್ನ ನುಡಿಗೊಡಂಬಟ್ಟೆನಾಕೆಯುಂ ತಾಯೆಂದು ವಕ್ರೋಕ್ತಿಯಿಂ ನುಡಿವುದುಮಾ ಕ್ಷಣದೊಳೆ ಪೋಗಿ ಪುರದೊಳ್ ಕೂಟಮಪ್ಪಂತು ಮಾಡೆನೆ ಮನದೆ ಕೊಂಡಂತೆ ಗೆಯ್ವೆನೆಂದು ಸಾಲ ವಿದ್ಯಾಭೇದಿನಿಯುಂ

ಪ್ರತಿವಿದ್ಯೆಯನಾಕೆ ಕುಲ।
ಕ್ಷತಿಯುಂ ಪತಿಗಪ್ಪಹಾನಿಯುಂ ಬಗೆಯದೆ ದು॥
ರ್ಮತಿ ಕೊಟ್ಟಳದೆನ್ನರುಮುಂ।
ಮತಿಗಿಡಿಪುದು ಚೋದ್ಯಮಲ್ತು ಮದನೋನ್ಮಾದಂ ॥೬॥

ಅಂತಾಕೆಯ ಕಯ್ಯೊಳಾವಿದ್ಯೆಯಂ ಕೊಂಡು ಕಟಿಪಿ ಮಱುದಿವಸಂ
ಸಾಲವಿದ್ಯೆಯಂ ಪ್ರತಿವಿದ್ಯೆಯಿಂ ಕಿಡಿಸಿ ದುರ್ಲಂಘ್ಯಪುರಮಂ ರಾವಣಂ ಮುತ್ತು
ವುದುಂ

ಸೆರಗಂ ಬೆರಗಂ ಬಗೆಯದೆ।
ಪುರಮಂ ಪೊಱಮಟ್ಟು ಕಾದುವಾಗಳ್ ನಳಕೂ॥
ಬರನಂ ವಿಭೀಷಣಂ ಮುದ।
ಕರಿಯಂ ಮೃಗವೈರಿ ಪಿಡಿವ ತೆಱದಿಂ ಪಿಡಿದಂ ॥೭॥

ಆ ಸಮಯದೊಳ್

ದನುಜಾಧೀಶ್ವರನ ಪುರಾ।
ತನ ಪುಣ್ಯದ ಫಲದಿನಾಯುಧಾಗಾರದೊಳೀಂ॥
ಜನಿಯಿಸಿದುದೊ ವಿದ್ವಿಷ್ಟಾ।
ವನಿಪಾಲ ಪ್ರಳಯ ಕಾಲಚಕ್ರಂ ಚಕ್ರಂ ॥೮॥

ಅಂತು ಸುದರ್ಶನಚಕ್ರಂ ಪುಟ್ಟುವುದುಂ ರಾವಣಂ ಮಹೋತ್ಸವದಿಂ
ಚಕ್ರಪೂಜೆಯಂ ಮಾಡಿ ರಹಸ್ಯದಿಂದಾಕೆಯಂ ಕರೆದು ನೀನ್ ವಿಶುದ್ಧ
ಕುಲದ ಕುಶಧ್ವಜಂಗಂ ಮಧುಕಾಂತೆಗಂ ಪುಟ್ಟಿದುದಱಿಂ ನಿಜ ಕುಲಾಚಾ
ರಮಂ ಬಗೆದು ಶೀಲಪರಿಪಾಲನಂ ಮಾಳ್ಪುದಾತಲ್ಲದೆಯುಂ ನೀನೆನಗೆ
ವಿದ್ಯೋಪದೇಶಂಗೆಯ್ದುದಱಿಂ ಗುರುವಾದೆ ಪೆಱತೇನುಮಂ ಬಗೆಯದೆ ನಳ
ಕೂಬರನೊಳ್ ಕೂಡಿ ಸುಖಮಿರೆಂದಾಕೆಯ ದುಷ್ಪರಿಣಾಮಮಂ ಪತ್ತುವಿಡಿಸಿ

ನಳಕೂಬರನುಮನಾಕ್ಷಣ।
ದೊಳೆ ಬರಸಿ ನಿಜಾಗ್ರತನನಿಂದಗಿಯಿಂದ॥
ಗ್ಗಳಮೆನೆ ಮನ್ನಿಸಿ ಭಯಮಂ।
ಕಳೆದಿತ್ತಂ ಭೃತ್ಯಪದವಿಯಂ ದಶವದನಂ ॥೯

(ರಾಮಚಂದ್ರ ಚರಿತ ಪುರಾಣ) —ನಾಗಚಂದ್ರ

## ೧೩. ಸೀತಾಪಹರಣ

ಅಳಿಪಿ ಪರವಧುಗಧೋಗತಿ।
ಗಿಱುವುದನಭಿನಯಿಸುವಂತೆ ಸೀತೆಯ ಸಾರ॥
ಣ್ಗಿಱಿದಂ ನಭದಿಂ ಖಚರಂ।
ಪಱಿಗಂ ಪಾಪಕ್ಕಮಂಜದವರೇಗೆಯ್ಯರ್ ॥೧॥

ದೋಷಿ ಪಿಡಿವಂತೆ ದಿವ್ಯದ।
ಕಾಸಿದ ಕುಳುವಂ ಕಡಂಗಿ ಕಾಳೋರಗನಂ॥
ಕೂಸು ಪಿಡಿವಂತೆ ಪಿಡಿದಂ।
ಸಾಸಿಗನವಿವೇಕಿ ಸೀತೆಯಂ ದಶಕಂಠಂ ॥೨॥

ಅಂತು ಪಿಡಿದು ನಿಜ ವಿಮಾನದೊಳಿಟ್ಟು

ದಶಮುಖನುನ್ಮುಖನಳಿಪಿಂ।
ಶಶಿಮುಖಿಯಂ ಜನಕಸುತೆಯನಾವರಿಸೆ ಚತು॥
ರ್ದಶಭುವನಮನಪವಾದಂ।
ಶಶಿಕಲೆಯಂ ಸೈಂಹಿಕೇಯನುಯ್ವಂತುಯ್ದಂ ॥೩॥

ಆಗಳದಂ ಕಂಡು ಜಟಾಯು ಕೋಪಾನಲ ವಿಸ್ಫುಲಿಂಗದಂತಾರಕ್ತಂಗಳಾದ ಕಣ್ಗಳಿಂ ನುಂಗುವಂತೆ ನೋಡಿ

ಪತಿ ಕಾಪುವೇೞ್ದು ಪೋದಂ।
ಸತಿಯಂ ಕಳ್ದುಯ್ದಪಂ ಖಳಂ ಮಾರ್ಕೊಂಡು॥
ದ್ಧತನಂ ಮದೀಯ ತುಂಡಾ।
ಹತಿಯಿಂ ಶತಖಂಡಮಾಗೆ ಮಾೞ್ಪೆನೆನುತ್ತುಂ ॥೪॥

ಖರ ನಖರಂಗಳಿಂ ನಿಶಿತ ಚಂಚುಗಳಿಂದಿಱಿಯಲ್ ಕಱುತ್ತು ಸಾ।
ರ್ತರೆ ನಸುನಕ್ಕು ಪೊಯ್ಯೆ ಕರದಿಂ ಗಮನೋತ್ಸುಕನಿಂದ್ರವೈರಿ ತ॥

ನ್ನೆರಡುಮೆಱಂಕೆಗಳ್ ಮುಱಿದಿಳಾತಳದೊಳ್ ಕೆಡೆದತ್ತು ವಜ್ರದಿಂ
ಸುರಪತಿ ಪೊಯ್ಯೆ ಬಿಟ್ಟ ಕೆಡದಂತೆ ಜಟಾಯು ನಭೋವಿಭಾಗದಿಂ ॥೫॥

ಮನಮೇಳದಾಗೆ ಮನ್ಯು ಮಿಗೆ ತಳ್ತಿಮೆಯಿಂ ಕರೆಗಣ್ಮಿ ಸೂಸೆ ಕ।
ಣ್ಬನಿ ಗಳ ಕಂದಳಂ ಬಿಗಿಯೆ ಗದ್ಗದ ನಿಸ್ವನಮುಣ್ಮೆ ಹಾ ರವಂ॥
ಜನಿಯಿಸೆ ಸೀತೆ ಭೀತೆ ದೆಸೆಗೆಟ್ಟೆರ್ದೆಗೆಟ್ಟಱಿ ಪೊಣ್ಮಿದತ್ತು ಮಾ।
ರ್ದನಿ ದೆಸೆಯೊಳ್ ದಿಗಂಗನೆಯರುಂ ಬಿಡದಂದೊಡನೞ್ವ ಮಾಱ್ಕೆಯಿಂ॥೬॥

ಭೋಂಕನೆ ಕಂಡು ಸೀತೆ ದಶಕಂಧರನಂ ನೆಲೆವೆರ್ಚೆ ಶೋಕಮಾ।
ತಂಕಮೊಡರ್ಚೆ ಪುಷ್ಪಕ ವಿಮಾನದ ರತ್ನ ವಿಚಿತ್ರ ಪತ್ರಿಕಾ॥
ಸ್ಸಂಕುಲಮುಱ್ತುಡಱ್ತು ಬೆಮರ್ತೊಡೆ ಕೂಡೆ ಬೆಮರ್ತುವಾಗಳಾ।
ಲಂಕೆಯ ಸೂಡನುನ್ನತಿಯ ಕೇಡನಮಂಗೆ ನಿವೇದಿಪಂತೆವೋಲ್ ॥೭॥

ಬಲಿಗೊಳಗಾದ ಸೋಗೆ ನವಿಲಂತೆ ಭಯಾಕುಲೆ ತನ್ನ ಚಿತ್ತದೊಳ್।
ನೆಲಸಿದ ರಾಮನಂ ಬಯಸಿ ನೋಡಲಪೇಕ್ಷಿಸಿ ಬಾಹ್ಯ ದರ್ಶನ॥
ಕ್ಕಲಸಿದಳೆಂಬಿನಂ ಮುಗಿಯೆ ಕಣ್ಮನಲರ್ಗಳ್ ನಸುಮುಚ್ಚಿಪೋಗಿ ತ।
ಣ್ಣೆಲರಲಿಪಿಂಬೆ ಮೂರ್ಛೆದಿೞ್ದಳ್ ಮಗುಳ್ದುಂ ಪೊಱಪೊಣ್ಮೆ ಹಾ ರವಂ ॥೮॥

ಕ್ರೂರಾತ್ಮಂ ವಂಚಕನವಿ।
ಚಾರಿ ದುರಾಚಾರಿ ಬಗೆಯದುಯ್ದಪನೆನ್ನಂ॥
ಹಾ ರಾಮಾ ಹಾ ರಾಮಾ।
ಹಾ ರಾಮಾ ಎಂದು ಸೀತೆ ಬಾಯಬಿಡುತ್ತಿರ್ದಳ್ ॥೯॥

ಅಂತು ಶೋಕಂಗೆಯ್ವ ಸೀತೆಯಂ ದಶಾಸ್ಯನ್ ಪರಾಂಗನಾವಿರತಿ ವ್ರತದ ಭಂಗಮಂ ಬಗೆಯದುಯ್ದನ್

(ರಾಮಚಂದ್ರಚರಿತ ಪುರಾಣ) —ನಾಗಚಂದ್ರ

## ೧೪. ಕಾಮದಹನ

ತನ್ನ ಸರಸದೃಷ್ಟಿಗಳಿಂ ಹರನಂ ನೋಡುತುಂ ತಪೋಭರಮಂ
ಬಿಡಿಸಲಿರ್ದ ಮೃಡಾನಿಯುಂ ಕುಸುಮಕೋದಂಡಂ ಕಂಡು,

ಇನ್ನಂಜೆನಂಜೆನಾಹಾ।
ಉನ್ನತಬಲಮಾಯ್ತೆನುತ್ತೆ ವಿಭ್ರಮಬಳಸಂ॥
ಪನ್ನಂ ಕಾಮಂ ತೆಗೆದಂ।
ತನ್ನಗ್ಗದುದಂಚಪಂಚಬಾಣಮನಾಗಳ್ ॥೧॥

ನಳನಳಿಸುವಿಕ್ಷುಚಾಪದೊ।
ಳಳವಡೆ ನಟೆನೋಡಿ ಹೂಡುತೈದಂಬಂ ಸಂ॥
ಚಳಿಸದ ಶಂಕರನ ಮನಂ।
ಚಳಿಯಿಪುದಂ ಸಾರ್ದು ಸಾರ್ದು ತೆಗೆ ನೆಱೆದಿರ್ದಂ ॥೨॥

ತೆಗೆದಾಕರ್ಣಾಂಬರಂ ಶಂಬರರಿಪು ನೆಱೆ ಹೂಡಿರ್ದ ಪುಷ್ಪಾಸ್ತ್ರದೊಂದು।
ಜ್ಜಗಮಾಕಾಶಸ್ಥನಾಕೌಕರೊಳೊದವಿದನೂನಾರ್ತಿ ಕೂರ್ತೆಯ್ದೆ ನಿಂದಿ॥
ರ್ದ ಗಜಾಚಿತ್ತಾಭಿಲಾಷಾವಿತತಿ ನೆರೆದು ಭೂತೇಶಚಿತ್ತಾಂತರದೊಳ್ ಪ್ರೋ।
ಕ್ಷ್ಯಗಭೀರೋದ್ಯತ್ ತಪೋಬೀಜಮನತಿಭರದಿಂದೊತ್ತಿ ಮುತ್ತಿತ್ತು ಸುತ್ತಂ॥೩॥

ಇಂತು ಮದನನ ಪಂಚಬಾಣಂ ಪರಿತಂದು ನೆರೆದಡಪಿ ಬೆರಸಿ ಕವಿದು ಮನಮನಿರ್ಮೆಯ್ಗೊಂಡು ಸಹಸ್ರಮುಖದಿಂ ಸಂಚಳಮನೀಯೆ ನಿಲಲ್ ಬಾರದೆ ತಪೋಭರದ ಬೆಸುಗೆ ಬಿಡುವಂತೆ ಮೆಯ್ಯ ಸಂಪುಟಂ ಬಿರ್ಚಲೊಡಂ ನೋಡಿ ನೋಡಿ ನೋಡಲಣ್ಮದೆ ಪುಷ್ಪಶರಮಂ ಸೂಳ್ಮಡಿಸುವಂತೆ ಪುಷ್ಪಾಂಜಲಿಯಂ ಕೊಟ್ಟಂತೆ ಕಂಪಿಸಿ ಮುಂತೆ – ಮೆಯ್ಯಿಕ್ಕಿರ್ದ ಗಿರಿಜಾತೆಯುಂ ಭೂತೇಶ್ವರಂ ಕಂಡಾನೇಕೆಯ್ದೀ ಮಾನಿನಿಯೇಕೀ ತಪಸೊಳಿಲ್ಲಿಯದೆತ್ತಣಿಂ ಬಂದುದಾರ್ಗಿ

ದಾದುದೆಂದು ಕಾಮನಿರ್ಪ ವಾಮಭಾಗವಂ ನಿಟಿಲಾಕ್ಷಂ ನಸುಗೋಪದಿಂ ನೋಡಿದಾಗಳ್,

ನೋಡದ ಮುನ್ನಂ ಕೋಪಂ।
ನಾಡೆಯುಮೊತ್ತರಿಸಿ ನೀಳ್ದು ನಿಟಿಲೇಕ್ಷಣದೊಳ್॥
ಕೂಡೆ ಬಳೆಬಳೆದು ಸುಳಿಸುಳಿ।
ದೀಡಿಱಿದೊಳಗೊಳಗೆ ಘುಳುಘುಳಿಸಿ ಕುದಿದಾಗಳ್ ॥೪॥

ಪೊಗೆದುದು ಪೊತ್ತಿದತ್ತು ಕಿಡಿಯಿಟ್ಟುದು ನಾಲ್ದೆಸೆದೋಱಿದತ್ತು ಬಾನ್।
ಗೊಗೆದುದು ನಿಂದು ಪೊಂಬೆಳಗುಮಂ ಪರಪುತ್ತದು ಧಂ ಧಗಿಲ್ ಧಗಿಲ್॥
ಧಗಿಲೆನುತಟ್ಟಿತಟ್ಟಿದುದು ಮುಟ್ಟಿತು ಸುಟ್ಟಿತು ತಿಂದು ತೇಗಿದ।
ತ್ತಗಿಯಡೆ ನಿಂದ ಪೊಗಣೆಯನಂ ಪಣೆಗಣ್ಣೊರಿ ಹಂಪೆಯಾಳ್ದನಾ ॥೫॥

ಇಟ್ಟಣಿಸಿ ಘುಡುಘುಡಿಸಿ ಕಿಡಿ।
ಗುಟ್ಟಿ ಕನಲ್ದಡಸಿ ಸಿಡಿಲ ಬಳಗದ ಮುಳಿಸಂ॥
ತೊಟ್ಟುದು ಬಿಸುಗಣ್ಣುರಿ ಪೊಱ।
ಮಟ್ಟುದು ಸುಟ್ಟುದು ರತೀಶನಂ ನಿಮಿಷಾರ್ಧಂ ॥೬॥

ತೊಟ್ಟನೆ ಬಾಳಾನಲನಿರ।
ದೊಟ್ಟಯಿಸಿಯೆ ಕುಸುಮಶರನನುರುಪಿದ ಪದದೊಳ್॥
ಪುಟ್ಟಿತುಮಂ ಪೋದುದುಮಂ।
ಸುಟ್ಟುದುಮಂ ಕಾಣಬಾರದಾಯ್ತು ಕ್ಷಣದೊಳ್ ॥೭॥

ಅಂತುಮಲ್ಲದೆ,

ಆರರೇ ಭುರ್ಭುಗು ಭಾಪುರೇ ಭುಗುಭುಗು ಪ್ರಜ್ವಾಲೆ ಮಜ್ಜಯ್ಯ ದೇ।
ವುರೆ ಮೇಘಾನಲವಿಸ್ಫುಲಿಂಗಮುಮು ಪ್ರದ್ಯೋತವಯ್ಯಯ್ಯ ಭೀ॥

ಕರವಾಹಾ ಛಿಣಿಛಿಳ್ ಛಿಟಿಲ್ ಭಲರೆ ಭಾಳಾಭೀಳವೆಂದೆಂದು ನಿ।
ರ್ಜರಲೋಕಂ ಬೆಱಗಾಗೆ ಸುಟ್ಟುದು ವಿರೂಪಾಕ್ಷಾಕ್ಷಿ ಕಂದರ್ಪನಂ ॥೮॥

ಸಂದಣಿಸಿ ಪತ್ತಿದುರಿ ಘರಿ।
ಲೆಂದುರುಪಿಡೆ ಬೇಗದಿಂದೆ ಉರಿದಾಕ್ಷಣದೊಳ್॥
ಬೆಂದ ನುಲಿಯಂತೆ ಮದನಂ।
ನಿಂದಿರೆ ಕಂಡಭವನೆಯ್ದೆ ಮುಳಿದಂ ತುಳಿದಂ ॥೯॥

ಜಯಶೀಲು ಪ್ರಭು ಪಾವಕ।
ನಯನಂ ವಿಷಕಂಠನಹಿವಿಭೂಷಂ ಕೋಪೋ॥
ದಯನಭವಂ ಸ್ಮರಭಸ್ಮಾ।
ವಯವಂ ತಾನಾದನತುಳಬಳನಪ್ರತಿಮಂ ॥೧೦॥

(ಗಿರಿಜಾ ಕಲ್ಯಾಣ) —ಹಂಹರದೇವ

## ೧೫. ವಿರೂಪಾಕ್ಷ ಪ್ರತ್ಯಕ್ಷ

ಪನ್ನಗಭೂಷಣನ್ ಗಿರಿಜೆಯ ಮನಮನೊರೆದು ನೋಡುವ ಭರದಿಂ,

ದಶಭುಜಮಂ ಪಂಚಾಸ್ಯಮು।
ನಶೇಷಭೀಮಾಂಗವಿತತಿಯುಂ ತನುವಿನೊಳಂ॥
ವಶಮಂ ಮಾಡುತಡಂಗಿಸಿ।
ಪಶುಪತಿ ವಟುವೇಷದಿಂದಮೊಪ್ಪುತ್ತಿರ್ದಂ ॥೧॥

ಮಿಗೆ ಶೀತಾಂಶು ಚಕೋರಿಯಲ್ಲಿಗೆ ವಸಂತಂ ರಾಜಿಪುದ್ಯಾನದ।
ಲ್ಲಿಗೆ ಸೂರ್ಯಂ ಸರಸೀಜದಲ್ಲಿಗೆ ವರಪ್ರಾಣಾನಿಳಂ ದೇಹದ॥

ಲ್ಲಿಗೆ ಮೇಘಂ ಶಿಖಿಯಲ್ಲಿಗೊಪ್ಪುವ ಮರಾಳಂ ಪೂರ್ಣಕಾಸಾರದ।
ಲ್ಲಿಗೆ ಬರ್ಪಂತೆ ಭವಾನಿಯಲ್ಲಿಗಭವಂ ಬಂದಂ ಜಗದ್ವಲ್ಲಭಂ ॥೩॥

ಇಂತು ಭೂಲೋಕಕ್ಕಿಳಿತಂದು ಹೇಮಕೂಟದೊಳ್ ಹೈಮವತಿಯಿರ್ಪ ತಪೋವನಮಂ ಪೊರ್ದಿ ಕಪಟವಟುವೇಷಮಂ ತಳೆದ ಕಪರ್ದಿ ಪಾರ್ವತೀದೇವಿಯರ್ ತಪದೊಳಿರ್ಪ ಸೀಮಾಸಮಿಾಪದ ವಿಶಾಲಬಾಲಚೂತಶೀತಳಚ್ಛಾಯೆಯೊಳ್ ಕುಳ್ಳಿರೆ ಸಹಚರಿಯರಪ್ಪ ಜಯೆವಜಯೆಗಳ್ ಕಂಡು,

ತರಳನಪೂರ್ವಿಗನತಿಥಿ।
ಸ್ವರೂಪನಿಷದ್ ವಿಭೂತಿಲಸಿತಲಲಾಟಂ॥
ವರವಿಪ್ರನೆನುತೆ ಬಂದಾ।
ದರಿಸಿದರೊಲವಿಂದೆ ಚರಣತಳಮಂ ತೊಳೆದರ್ ॥೬॥

ಅಂತು ತೊಳೆದು,

ಎಳಮಾಳಿಯ ಸುಳಿಯೆಲೆಯೊಳ್।
ನಳನಳಿಸುವ ಕಂದಮೂಲಮಂ ನವಜಂಬೂ॥
ಫಳಮಾಮ್ರಫಳಂ ಕದಳೀ।
ಫಳಂಗಳಂ ತೀವಿ ತಂದು ಮುಂದಿಳಿಪುತ್ತುಂ ॥೪॥

ಎಲೆಯತಿಥಿ ಬಳಲ್ದಿರಿವಿಾ।
ಫಲದಿಂದಂ ನಿಮ್ಮ ಪಸಿವನುಡುಗಿಸಿಯೆನೆ ಹೈ॥
ಫಲವಂ ಆಯ್ಕೊಂಡಪೆವೀ।
ಲಲನೆಯದಾರ್ ತಪವಗಣ್ಯಮಾವನ ಪುಣ್ಯಂ ॥೫॥

ಎಂದು ನುಡಿಯೆ ಜಯೆವಿಜಯೆಗಳ್ ಕೇಳ್ದು,

ಇವರಿರವಿನ ಚಿಂತಾರತಿ।
ನಿವಗೇಕೀ ಕ್ಷುಧೆಯನೀ ಪಥಶ್ರಮಮಂ ತೀ-।

ರ್ಚಿವ ಬಗೆಯಂ ಬೇಗಂ ಮಾ।
ಡುವುದೆನೆ ನಸುನಗುತೆ ವಿಪ್ರನಂದಿಂತೆಂದಂ ॥೬॥

ಬೆಸಗೊಂಡೊಡೆ ದೋಷಮೆ ಈ।
ಪೊಸಕನ್ನೆ ತಪೋನಿರೋಧದಿಂದಿರ್ದೊಡೆ ಸೈ॥
ರಿಸಬರ್ಪುದೆ ತಪಮಂ ಮಾ।
ಣಿಸುವವರಿಲ್ಲಾ ಸಹಾಯಸಂಪದಮಿಲ್ಲಾ ॥೭॥

ಎನೆ ಕೇಳ್ದು ಗಿರಿಜೆ ಮನದೊಳ್।
ಮುನಿಯುತ್ತುಂ ಜಪವನುಡುಗಿ ಜಪಮಾಲೆಯನೊ॥
ಯ್ಯನೆ ಕೆಯ್ಯೊಳೋಸರಿಸಿ ಮೆ।
ಲ್ಲನೆ ಕಣ್ದೆಱೆಯುತ್ತೆ ಕಂಡಳಾ ವರವಟುವಂ ॥೮॥

ಆ ಸಮಯದೊಳ್,

ಇಂದುಂಗೆ ಮೇಘಂ ಕವಿಪೊಡ।
ಮಂದೀ ಲೋಕಕ್ಕೆ ತಣ್ಪು ತಪ್ಪದ ತೇಜದಿಂ॥
ದಿಂದುಧರಂ ವರವಟುವೇ।
ಷಂದಳೆದೊಡನಗಜಗಾದುದತಿಹರ್ಷಮುಖಂ ॥೯॥

ಅಂತು ಹರ್ಷವನಿಮಿತ್ತಮೇಕಾದಪುದೆಂದು ನಿಮಿತ್ತಮನಱಿಯದೆ ಬೆಱಗಾಗಿ ನೋಡುತಿರ್ಪಲ್ಲಿ

ಗಿರಿಸುತೆಯ ಮಧುರದೃಷ್ಟಿಗ।
ಳುರವಣೆಯಿಂ ತಾಗೆ ತನ್ನನಾಗಳ್ ವಿಪ್ರಂ॥
ಕರಗಿ ನಿಲಲಾರದೆಲ್ಲಾ।
ತುರಪುಳಕಮನಂತುಮಿಂತು ಸಂತಮಿಡುತ್ತುಂ ॥೧೦॥

ನೆಗೆವ ಜಡೆಮುಡಿಯನೊತ್ತು।
ತ್ತೊಗೆವ ಭುಜಾಳಿಯನಡಂಗಿಸುತ್ತೂರುಗಳಿಂ॥
ಮಿಗುವ ವೃಷೇಂದ್ರನನಾಂಕು।
ತ್ತಗಲದೆ ನಿಜಮೂರ್ತಿಯೊಳಗೆ ಗಜಬಜಿಸುತ್ತುಂ ॥೧೧॥

ಎಂತಾನುಂ ನಿಜರೂಪಂ।
ಸಂತವಿಡುತ್ತಲ್ಲಿ ವಿಪ್ರನತಿಧೈರ್ಯತೆಯಂ॥
ಮುಂತಿಟ್ಟು ಗಿರಿಜೆಯೊಡನುಸಿ।
ರ್ದಂ ತಡಬಡಿಸುತ್ತೆ ವಿಸುಪ ಪೊಸಪುಸಿವಾತಂ ॥೧೨॥

ಈ ಸುಕುಮಾರತೆಯಿಾ ನಿಲ।
ವೀ ಸುಕುರತೆಯಿಾ ನವೀನಯೌವನಮುದವೀ॥
ಭಾಸುರತೆಯಿಾ ಸುಧಾಮಯ।
ವೀ ಸುಖದೊಳ್ ತಪವಿದೆಂತು ಬಂದುದು ಮುಗ್ಧೇ ॥೧೩॥

ನಿನಗೇಕೀ ತರುಣತೆಯೊಳ್।
ಘನತಪವೆಡೆಗೊಂಡುದಕಟ ನವಲತೆಯಂ ಸೂ॥
ರ್ಯನ ಬಿಸಿಲಿಂ ಕೊರಗಿಪ ದು।
ಷ್ಟನನೆನಗಱಿಪಬಲೆ ಸೌಕುಮಾರ್ಯಾವರಣೇ ॥೧೪॥

ಬಿಸಿಲೆನ್ನದೆ ಮಳೆಯೆನ್ನದೆ।
ಶಿಶಿರಮಿದೆನ್ನದೆ ತೃಷೋನ್ನತಿ ಕ್ಷುದೆ ನಿದ್ರಾ॥
ವಿಸರಮುಮಂ ನೆಱೆ ಗೆಲ್ದೀ।
ವಸುಮತಿ ಬೆಱಗಾಪೆ ತಪದೊಳಿರ್ಪ ವರುಂಟೇ ॥೧೫॥

ವನಜಾನನೆ ಏಱುಂಜ।
ವ್ವನದೊಳ್ ವನದೊಳ್ ನಿರೋಧದೊಳ್ ಪೇಳೆಂತಾ॥

ವನನುದ್ದೇಶಿಸಿ ತಪವಿದ।
ನೆನಗಜೀಪಿದೊದೇನೊ ದೋಷವೇ ಮೃಗನಯನೇ ॥೧೬॥

ಎಂದು ಪ್ರೇಮಜನಪ್ರಣಯಕಲಹಲೀಲಾಲೋಲಚಿತ್ತನಪ್ಪ ವಿರೂಪಾಕ್ಷಂ ಪರಮವಟುವೇಷದಿಂ ನುಡಿದ ಮೃದುಕಠಿನಾಕ್ಷೇಪಗರ್ಭಿತವಚೋವಿಳಾಸವಂ ಶೈಳಜೆ ಕೇಳ್ದು ಚಿಂತೆಯಂ ತಾಳ್ದು,

ಬೆಸಗೊಂಡಪನವಳದ್ವಿಜ।
ನುಸಿರಲ್ ತಾಂ ಬಾರದುಸಿರದಿರಬಾರದೆನು॥
ತ್ತುಸದೃಶತಪಮಂ ಮನದು।
ಬ್ಬಸದಿಂದೆ ಭವಾನಿ ಮಾನಿ ಮೆಲ್ಲನೆ ನುಡಿದಳ್ ॥೧೭॥

ಬಗೆವೆರ್ಚಿ ಕೇಳುತಿರ್ದಪೆ
ಮಿಗೆ ಪೇಳ್ದಪೆನೆಲೆಲೆ ಧೂರ್ತವಿಪ್ರನೆ ಕೇಳ್ ಶಂ॥
ಭುಗೆ ಕಾರುಣ್ಯಾಬ್ಧಿಗೆ ಶೂ।
ಲಿಗೆ ಕರುಣಂ ಪುಟ್ಟುವಂತೆ ತಪದಿಂದಿರ್ಪೆಂ ॥೧೮॥

ಎನುತುಂ ಗದ್ಗದಿಸುತೆ ಪುಳ।
ಕನಿಕಾಯುಮನಾನುತಶ್ರುವಂ ಕಳೆಯುತ್ತುಂ॥
ಘನಹರ್ಷಚಿತ್ತೆಯಾಗು।
ತ್ತೆನಗೇಶ್ವರಪುತ್ರಿ ಶಂಕರನ ಪೆಸರ್ಗೊಂಡಳ್ ॥೧೯॥

ಎಂದು ವಿರೂಪಾಕ್ಷಂಗೆ ತಪವಿರ್ದಪೆನೆಂಬ ನುಡಿಯಂ ಕೇಳ್ದು ದುಷ್ಟ ಧರಾಮರನಟ್ಟಹಾಸದಿಂದಿಂತೆಂದಂ,

ಅಕ್ಕಕ್ಕ ಕಾಮಹರನೊಳ್।
ಮುಕ್ಕಣ್ಣನೊಳಖಿಳವೇದಶಾಸ್ತ್ರಕ್ರಮಮಂ॥

ಮಿಕ್ಕವನೊಳ್ ಪಿತೃವನದೊಳ್।
ಪೊಕ್ಕವನೊಳದೆಂತು ಚಿತ್ತವಿಟ್ಟೆ ಲತಾಂಗೀ ॥೨೦॥

ನೀನಿನಿಯಳ್ ವಿಷಮಾತಂ।
ನೀನತಿಮೃದು ಕಠಿನಗುಣಗಣಾಶ್ರಯನಾತಂ॥
ನೀನಬಲೆಯುಗ್ರನಾತಂ।
ನೀನುರುತರಭೀರು ಸರ್ಪಭೂಷಣನಾತಂ ॥೨೧॥

ಪುಲಿದೊವಲುಡುಗೆಯು ಹಾವಿನ।
ನೆಲೆದೊಡಿಗೆಯು ನೊಸಲ ಕಣ್ಣು ಖಟ್ವಾಂಗದ ಪಂ॥
ದಲೆಗಳ ಮಾಲೆಯು ಶೂಲದ।
ಕಲಿಗಂಜದೆ ಮನವನೆಂತು ಮಾಡಿದೆ ಮುಗ್ಧೇ ॥೨೨॥

ಎಂದು ವಿಪ್ರಂ ನುಡಿದ ಶಿವನಿಂದಿಗೆ ಭವಾನಿ ಮುನಿದು ಕನಲ್ದು ಕಿನಿಸಿ ಕಿಡಿಕಿಡಿವೋಗಿ,

ತಪವಂತದಿರ್ಕೆ ಮಾಡುವ।
ಜಪವಿರ್ಕೆ ಮೃಗಾಂಕಮೌಳಿಯುಂ ಭರದಿಂ ಧ್ಯಾ॥
ನಿಪ್ಪುದಿರ್ಕೆ ಶಂಭುವಂ ನಿಂ।
ದಿಪ್ಪುವಂ ಕೇಳ್ವೊಂದು ಪಾಪಮಿಂದೆನಗಾಯ್ತೇ ॥೨೩॥

ಘೋರತಪದಲ್ಲಿ ಕೋಪಿಸ।
ಬಾರದು ತಾಂ ತಪದ ಕೇಡು ಪತಿನಿಂದೆಯುಮಂ॥
ಸೈರಿಸಬಾರದೆನುತ್ತೆ ವಿ।
ಚಾರಮನುೞಿದಗಜೆ ಮನದ ಮುೞಿಸಿಂದಾಗಳ್ ॥೨೪॥

ಆದ ನಿರೋಧದ ನಿಂದೆಯು।
ನಾದರಿಸದೆ ಭಸಿತದಿಂದೆ ವಿಪ್ರನನಿಡೆ ಪೋ॥

ಪೋದುದು ವಟುವೇಷಂ ಶಿವ।
ನಾದೊಡದೇಂ ಪುಸಿ ದಿಟಕ್ಕೆ ನಿಲ್ವುದೆ ಜಗದೊಳ್ ॥೨೫॥

ಆಗಳ್,

ಮುಗಿಲ ತೆಱೆ ಸರಿದ ಶಶಿಯಂ।
ತೊಗೆದ ತಮಂ ತೆಗೆದ ತರುಣತರುಣಿಯ ತೆಱದಿಂ॥
ಪೊಗೆ ತಳ್ಗಿದಗ್ನಿಯಂತಿರೆ।
ಮಿಗೆ ವೇಷಂ ತೊಲಗಿ ಶಂಭು ತೋಱಗುತ್ತಿರ್ದಂ ॥೨೬॥

ಜಡೆಮುಡಿ ಪಂಚಮುಖಂ ನೆಗೆ।
ದುಡುಪತಿಕಳೆ ದಶಭುಜಂ ತ್ರಿಣೇತ್ರಂ ಗಾತ್ರಂ॥
ಬಿಡಿದ ನವಭೂತಿ ಪುಲಿದೊವ।
ಲುಡಿಗೆಗಳಿಂ ಶಂಕರಂ ಕರಂ ಮೆರೆದಿರ್ದಂ ॥೨೭॥

ಆ ಸಮಯದೊಳ್,

ಸುರಿದುದು ಪುಸಿವೇಷದ ತೆಱೆ।
ಸುರಿದುದು ಕೆಯ್ನೀರ ತೆಱದೆ ಪೂವಳೆ ಸರಿಸಂ॥
ಬರಿದುದು ಜೀರಿಗೆಬೆಲ್ಲದ।
ಪರಿಯಿಂ ಮುಳಿದಿಟ್ಟ ಭಸಿತಮದೆ ಮದುವೆಯವೋಲ್ ॥೨೮॥

(ಗಿರಿಜಾ ಕಲ್ಯಾಣ) —ಹರಿಹರದೇವ

# ೧೬. ಮಂಗಳವಾಡಿಗೆ ಬಸವಣ್ಣನ ಆಗಮನ

ಎಂದಲ್ಲಿ ಕರುಣಿಸಿದ ಮಾತು ಸಂಬಳವಾಗಿ
ಬಂದನೆಂತೆಂತಕ್ಕೆ ಅಗಲಲಾರದೆ ರಾಗಿ
ಸಂಗಮನ ಕರುಣವೇ ತನಗೆ ಬೆಂಬಲವಾಗಿ
ಸಂಗಮಧ್ಯಾನವೇ ತನಗೆ ಸಂಗಡವಾಗಿ
ಸಂಗನಾಡಿದ ಮಾತನಾಡಿ ಹಾರೈಸುತಂ
ಸಂಗನಿರ್ದಿರವ ತಾ ನೆನೆದು ನೆಱೆ ಹಿಗ್ಗುತಂ
ನಡೆವಾಯುಸವನಜಃಯುದಾನಂದದಿಂ ಮಿಕ್ಕು
ಮೃಡನೆ ಶರಣೆನುತೆ ಮಂಗಳವಾಡಮಂ ಪೊಕ್ಕು
ಪಟ್ಟಣದ ಕೇರಿಕೇರಿಗಳೊಳಗೆ ನಡೆವುತಂ
ಇಟ್ಟಣಿಪ ಸಂಪದಕೆ ಸಂತಸಂಬಡೆವುತಂ
ಬಂದು ಬಿಜ್ಜಳರಾಯನರಮನೆಗೆ ನಡೆವುತಂ
ಸಂದಣಿಪ ರಾಜಪುತ್ರಾಳಿಯಂ ನೋಡುತಂ
ಮತ್ತ ಗಜಘಟಿತುರಂಗಾಳಿಯಂ ನೋಡುತಂ
ಒತ್ತರಿಪ ವೀರಭಟರೊಪ್ಪವಂ ಕಾಣುತಂ
ಭಾವರಸಪೂರಿತ ಕವೀಂದ್ರರಂ ನೋಡುತಂ
ನೇವುರದ ನುಣ್ದನಿಯ ಸತಿಯರಂ ನೋಡುತಂ
ಕುಪ್ಪಸದ ಬೀರಣೆಯ ಬಿನ್ನಣದ ಹಸನಿಗಂ
ಟೊಪ್ಪಿಗೆಯ ಹೊಜಪೇಷದಿಹಪರವ ಲಿಕ್ಕಿಗಂ
ನಡೆನಡೆದು ಕರಣಸಾಲೆಗೆ ಬಂದು ಕುಳ್ಳಿರ್ದು
ಸಡಗರಿಸಿ ಬರೆವ ಗಣಕರನೀಕ್ಷಿಸುತ್ತಿರ್ದು ೨೦
ಕರಣಸಂಪ್ರತಿಯ ಸಂಪದದ ಗಣಕರ್ಕಳಂ
ಎರೆವ ಲಂಚವನೀವ ದಂಡನಾಥರ್ಕಳಂ
ಲೆಕ್ಕಕ್ಕೆ ಬಂದಿರ್ಪ ರಾಜಪುತ್ರರ್ಕಳಂ
ಮಿಕ್ಕು ಝುಂಕಿಪ ಸಲುಗೆಯಾಳ್ಗಳೊಪ್ಪಂಗಳಂ

ನೋಡುತಂ ಬೆಱಗಾಗುತಲ್ಲಿ ಬಸವಣ್ಣನಿರೆ
ಕೊಡೆ ಲೆಕ್ಕದ ಸಂಭ್ರಮಂ ಸಿರಯುನುಗುಳುತಿರೆ

ಬಂದನಲ್ಲಿಗೆ ಮೆಱೆವ ಭಂಡಾರಿ ರಾಗದಿಂ
ಸಂದಣಿಸಿ ಲೆಕ್ಕಮಂ ನೋಡುವುದ್ಯೋಗದಿಂ
ಕಮ್ಮೆ ಕುಲಪತಿಯೆನಿಪ ಸಿದ್ಧದಂಡಾಧಿಪಂ
ಸುಮ್ಮಾನಿ ಶಿವಭಕ್ತನಚಳಿತಗುಣಾಧಿಪಂ
ಕುಳ್ಳಿರ್ದು ತನ್ನ ಲೆಕ್ಕಂಗಳಂ ಕೇಳುತಿರೆ
ಒಳ್ಳಿತೆನೆ ಗಣಕರ್ಕಳೆಲ್ಲರುಂ ನೋಡುತಿರೆ
ಆಯದೊಳು ಬೀಯಮಂ ಕಳೆದು ನಿಲವಂ ಕಂಡು
ಆಯತಿಯೊಳೆಲ್ಲರುಂ ಪೇಳಲ್ ಮನಂಗೊಂಡು
ಐದು ಕೋಟಿಯು ಮೇಲೆ ಲಕ್ಕವೈವತ್ತೆಂದು
ಐದೆ ಗಣಕರ್ ತಪ್ಪಿ ಪೇಳೆ ಭರದಿಂದಂದು
ತಪ್ಪಿದುದನಱಿದನಾ ಬಸವರಾಜಂ ನೋಡ
ಒಪ್ಪುವ ಗಣೇಶ್ವರರ ಗಣಕಾಧಿಪಂ ನೋಡ
ಭಂಡಾರಿಗಂ ಸ್ಥಿತವನೊಲಿದೊಡಂಬಡಿಸುತಿರೆ
ತಂಡತಂಡದ ಗಣಕತತಿ ತಪ್ಪದೆನುತಮಿರೆ ೪೦
ಕಂಡು ಬಸವಂ ಭಕ್ತನೊಡವೆ ಕೆಡಲಾಗದಿದು
ಕಂಡುದಂ ಪೇಳ್ವೆನಯ್ಯಾ ಎನುತ್ತಂ ನೆನೆದು
ಸಿದ್ಧದಂಡಾಧಿಪನನಲ್ಲಿ ಬಸವಂ ನೋಡಿ
ಬುದ್ಧಿ ನಿಮಗಿಲ್ಲ ತಪ್ಪಿದುದು ಲೆಕ್ಕಂ ನೋಡಿ
ಎಂದು ಮತ್ತೊಮ್ಮೆ ನೋಡಿಸುತಲಿಪ್ಪನಿತಕ್ಕೆ
ಸಂದಾಯಮಂ ಬೀಯದೊಳಗೆ ಕಳೆವನಿತಕ್ಕೆ
ಐದು ಕೋಟಿ ಸ್ಥಿತವನೊಳಗೆ ಗಣಕರ್ ಕಂಡು
ಐದೆ ಬಸವಣ್ಣನುಮನೀಕ್ಷಿಸುತೆ ಮನಗೊಂಡು
ಭಂಡಾರಿಯುಂ ಗಣಕರುಂ ಮತ್ತೆ ಮಿಗೆ ನೋಡಿ
ಕೊಂಡಾಡಿ ಬೆಱಗಾಗಿ ಕೌತುಕದೊಳೋಲಾಡಿ ೫೦

ಮಂಗಳವಾಡಿಗೆ ಬಸವಣ್ಣನ ಆಗಮನ ೪೫

ಹರೆಯುವಿದು ಲೆಕ್ಕವಿದು ಹರನ ಕಾರುಣ್ಯವಿದು
ಶರಣಕಾರಣಿಕನೀತಂ ನಮ್ಮ ಭಾಗ್ಯವಿದು
ಎಮಗೆ ತಮಗೆಂದು ಬಸವನನೆಲ್ಲರುಂ ಬೇಡಿ
ನಿಮಗಲ್ಲದೆನುತೆ ಭಂಡಾರಿಗಂ ತಾಂ ಕೂಡಿ
ಕೊಂಡೊಯ್ದು ಬಿಜ್ಜಳನನಲ್ಲಿ ಕಾಣಿಸಿ ದೇವ
ಕಂಡೆನಿಲ್ಲಿಂತಪ್ಪ ಮತಿಯ ನಿಂತೆಲೆದೇವ
ಲಕ್ಕವೈವತ್ತನಿಂತೆನಗಾಗುಮಾಡಿದಂ
ಲೆಕ್ಕದೊಳು ಪಡಿಯಿಲ್ಲ ಮತಿಯುಳ್ಳ ಕೋವಿದಂ
ಎನ್ನ ಭಂಡಾರಕ್ಕೆ ಬರೆಯಿಸುವೆನೀತನಂ
ಉನ್ನತಜ್ಞಾನಯುತಗಣಕವಿಖ್ಯಾತನಂ
ಎಂದು ಉಡಕೊಡಿಸಿ ಜೀವಿತವನಾಗಳೆ ಮಾಡಿ
ಒಂದು ವರುಷಕ್ಕೆ ನೂಱೊಂದು ಹೊನ್ನಂ ಬೇಡಿ
ಕೊಡಿಸಿ ಭಂಡಾರಿ ತನ್ನರಮನೆಗೆ ಕೊಂಡೊಯ್ದು
ಕಡುಮೋಹದಿಂದ ಹೊಗಳುತ್ತೆ ಮನ್ನಣೆಗೆಯ್ದು
[ಸುಖದಿನಿರ್ದಂ]

(ಬಸವರಾಜದೇವರ ರಗಳೆ) —ಹರಿಹರದೇವ

## ೧೭. ಹರಿಶ್ಚಂದ್ರ ಚಾಂಡಾಲ ಕನ್ನಿಕೆಯರ ಸಂವಾದ

ಹಂದಿಯಂ ಕಾಣುಹ ತಡಂ ಕೋಪಗಿಚ್ಚು ಭುಗಿ।
ಲೆಂದು ಜಪ ಜಾಱಿ ತಪ ತಗ್ಗಿ ಮತಿ ಗತವಾಗಿ।
ಸಂದ ಯೋಗಂ ಹಿಂಗಿ ದಯೆ ದಾಂಟೆ ನೀತಿ ಬೀ
ತಾನಂದವಱಿತು ಹೊಗಿ॥

ಹಿಂದ ನೆನೆದುರಿದೆದ್ದು ಸಿಕ್ಕಿದನಲಾ ಭೂಪ।
ನಿಂದು ನಾನಾಯ್ತು ತಾನಾಯ್ತು ಕೆಡಿಸದೆ ಮಾಣೆ।
ನೆಂದು ಗರ್ಜಿಸುವ ಕೌಶಿಕನ ಹೂಂಕಾರದಿಂ
ದೊಗೆದರಿಬ್ಬರು ಸತಿಯರು ॥೧॥

ಮುನಿಗೆ ಹೊಲೆಯಾವುದತಿಕೋಪ ಬದ್ಧದ್ವೇಷ।
ವನಿಮಿತ್ತ ವೈರವದಱಿಂದ ಹುಟ್ಟಿದರಾಗಿ।
ವನಿತೆಯರು ಕಡೆಗೆ ಹೊಲತಿಯರಾಗಿ ಕೆಲಸಾರಿ
ನಿಂದು ಬೆಸನಾವುದೆನಲು॥
ಜನಪತಿ ಹರಿಶ್ಚಂದ್ರ ಬಂದು ನಮ್ಮಯ ತಪೋ।
ವನದೊಳೈದನೆ ನೀವು ಸರ್ವಬುದ್ಧಿಗಳೊಳಾ।
ತನ ಮರುಳುಮಾಡುತಿರಿ ಹೋಗಿಯೆಂದಟ್ಟಿದಂ
ದುರ್ಮಂತ್ರಬಲವಂತನು ॥೨॥

ಸಂದ ಕಾರಿರುಳ ಕನ್ಯೆಯರು ಹಗಲಂ ನೋಡ।
ಲೆಂದು ಬಂದರೊ ಸುರಾಸುರರಬುಧಿಯಂ ಮಥಿಸು।
ವಂದು ಹೊಸ ವಿಷದ ಹೊಗೆ ಹೊಯ್ದು ಕಗ್ಗನೆ ಕಂದಿ
ಜಲದೇವಿಯರು ಮನದಲಿ॥
ನೊಂದು ಮಾನಿಸರಾದರೋ ಪಮುಲಜಂ ನೀಲ।
ದಿಂದ ಮಾಡಿದ ಸಾಲಭಂಜಿಕೆಗಳೊದವಿ ಜೀ।
ವಂದಳೆದವೋ ಎನಿಪ್ಪಂದದಿಂ ಬಂದರಂ
ಗನೆಯರವನೀಶನೆಡೆಗೆ ॥೩॥

ಮಾಯದಬಲೆಯರು ಕಾಣುತ್ತ ಮಝುಭಾಪದಟ।
ರಾಯ ಮಝುರೇ ರಾಯ ರಾಯದಳವುಳಕಾಱ।
ರಾಯಕಂಟಕ ರಾಯಜಗಜಟ್ಟಿ ರಾಯದ
ಲ್ಲಣ ರಾಯಕೋಳಾಹಳ॥

ರಾಯಭುಜಬಲಭೀಮ ರಾಯಮರ್ದನರಾಯ।
ಜೀಯ ಸ್ಥಿರಂಜೀವಯೆಂದು ಕೀರ್ತಿಸಿ ಗಾಣ।
ನಾಯಕಿಯರೊಲಿದು ದಂಡಿಗೆವಿಡಿದು ಪೊಡಮಟ್ಟು
ಹಾಡಲುದ್ಯೋಗಿಸಿದರು ॥೪॥

ಎಕ್ಕಲನ ಬಳಿವಿಡಿದು ಸುತ್ತಿದಾಸಜನು ಮುನಿ।
ರಕ್ಕಸನ ಬನಕೆ ಬಂದಂಜಿಕೆಯನೆರಡನೆಯ।
ಮುಕ್ಕಣ್ಣನೆನಿಪ ಗುರುವಾಜ್ಞೆಗೆಟ್ಟೆಳಲನ
ಲ್ಲದೆ ಕನಸ ಕಂಡ ಭಯವ॥
ಮಿಕ್ಕ ಮಟಿತಿಮಂಶಡಸಿ ಕವಿವ ಗತಿಗಳ ಸೊಗಸಿ।
ನಕ್ಕಿಸದೆ ಸಮಯೋಚಿತದ ಪಸಾಯಕ್ಕೆ ಮನ।
ವುಕ್ಕಿ ಸರ್ವಾಭರಣಮಂ ಗಾಣರಾಣಿಯರಿ
ಗಿತ್ತನು ಹರಿಶ್ಚಂದ್ರನು ॥೫॥

ಒಡತನದ ಹೊತ್ತಾನೆ ದೊರಕಿ ಫಲವೇನು ನೀ।
ರಡಿಸಿರ್ದ ಹೊತ್ತಾಜ್ಯ ದೊರಕಿ ಫಲವೇನು ರುಜೆ।
ಯಡಸಿ ಕೆಡೆದಿಹ ಹೊತ್ತು ರಂಭೆ ದೊರೆಕೊಂಡಲ್ಲಿ
ಫಲವೇನು ಸಾವ ಹೊತ್ತು॥
ಪೊಡವಿಯೊಡೆತನ ದೊರಕಿ ಫಲವೇನು ಕಡುವಿಸಿಲು।
ಹೊಡೆವು ಬೆಂಡಾಗಿ ಬೀಳ್ವೆಮಗೆ ನೀನೊಲಿದು ಮಣಿ।
ದೊಡಿಗೆಗಳನಿತ್ತು ಫಲವೇನು ಭೂಪಾಲ ಹೇ
ಳೆನುತ ಮತ್ತಿಂತೆಂದರು ॥೬॥

ಕಡಲೊಳಾಳ್ವಂಗೆ ತೆಪ್ಪವನು ದಾರಿದ್ರಂಗೆ।
ಕಡವರವನತಿರೋಗಿಗಮೃತವಂ ಕೊಟ್ಟಡವ।
ರಡಿಗಡಿಗದಾವ ಹರುಷವನೆಯ್ದು ತೆಪ್ಪರವ
ರಂ ಪೋಲ್ವರೇ ಪೊತ್ತಿನ॥

ಸುಡುಸುಡನೆ ಸುಡುವ ಬಿಜುಬಿಸಿಲ ಸೆಕೆಯುಸುರ ಬಿಸಿ।
ಹೊಡೆದುದುರಿಹತ್ತಿ ಬಾಯಱ್ ಬತ್ತಿ ಡಗೆ ಸುತ್ತಿ ಸಾ।
ವಡಸುತಿದೆ ನಿನ್ನ ಮುತ್ತಿನ ಸತ್ತಿಗೆಯನಿತ್ತು
ಸಲಹು ಭೂಭುಜಯೆಂದರು ॥೭॥

ರವಿಕುಲದ ಪೀಳಿಗೆಯೊಳೊಗೆದ ರಾಯರ್ಗೆ ಪ।
ಟ್ಟವ ಕಟ್ಟುವಂದಿದಿಲ್ಲದಡರಸುತನ ಸಲ್ಲ।
ದವನಿಯೊಳು ಯುದ್ಧರಂಗದೊಳಿದಂ ಕಂಡ ಹಗೆ
ಗಳು ನಿಲ್ಲರಿದಱ ಕೆಳಗೆ॥
ಕವಿವ ನೆಳಲೊಳಗಾವನಿರ್ದನಾತಂಗೆ ತಾಂ।
ತವಿಲೆಡರು ಬಡತನಂ ರೋಗವಪಕೀರ್ತಿ ಪರಿ।
ಭವಭಯಂ ಹರೆವುದಿದನಱಿದಱಿದು ಸತ್ತಿಗೆಯ
ಕೊಡಬಹುದೆ ಹೇಳೆಂದನು ॥೮॥

ಅನುನಯದೊಳೆಲ್ಲವಂ ಕೊಡಬಹುದು ಬಿಡಬಹುದು।
ಜನನಿಯಂ ಜನಕನಂ ನಲ್ಲಳಂ ದೈವವಂ।
ಮನವಾರೆ ನಂಬಿ ನಚ್ಚಿರ್ದ ಪರಿವಾರವಂ
ಕೊಡುನಬಿಡುವತಿ ಕಲಿಗಳು॥
ಜನರೊಳಗೆ ಜನಿಸರೆಂಬೆನಲು ನೀನೀಗ ಪೇ।
ಳ್ದನಿತಱೊಳಃ ಬೇಡಿದಡೆ ಕೊಡಬೇಡ ಕೊಡೆಯನೀ।
ಯೆನೆ ಲೋಭವೇಕರಸ ಎನಲಿದಲ್ಲದೆ ಬೇಱೆ
ಮಾತೆಪಿತರಿಲ್ಲೆಂದನು ॥೯॥

ಲೋಗರಿಗೆ ಕೊಡಬಾರದಾಗಿ ಸತಿ ವಂಶಗತ।
ವಾಗಿ ಬಂದುದಱಿಂದ ತಂದೆ ಪಟ್ಟವ ಕಟ್ಟು।
ವಾಗಲರ್ಚಿಸಿಕೊಂಬುದಾಗಿ ದೈವಂ ನೆಳಲ
ತಂಪನೊಸೆದೀವುದಾಗಿ॥

ಸಾಗಿಸುವ ತಾಯ್ ಧುರದೊಳರಿಗಳಂ ನಡುಗಿಸುವು।
ದಾಗಿ ಚತುರಂಗಬಲವೆನಿಸಿತೀ ಛತ್ರವೆಂ।
ಬಾಗಳಿದನಜುಂಡಜುಂದು ಬೇಡುವರಸತಿಯರುಳ
ರೆನ್ನರೇ ಮೂಜಗದೊಳು ॥೧೮

ಇಳೆಯೊಳಗೆ ಹೆಸರುಳ್ಳ ದಾನಿಯೆಂಬುದನು ಕೇ।
ಳ್ದೆಳಸಿ ಕಟ್ಟಾಸೆವಟ್ಟೆಯ್ತಂದು ಬೇಡಿ ನಿ।
ಷ್ಫಳವಾಗದಂತೆ ನಾವತಿಮುಜುಗದಂತಳಲ
ದಂತೆ ಬಿಸುಸುಯ್ಯದಂತೆ॥
ತಿಳಿದು ನೀನೆಮಗೆ ವಲ್ಲಭನಾಗಿ ಚಿತ್ತದು।
ಮ್ಮಳಿಕೆಯಂ ಕಳೆ ಹರಿಶ್ಚಂದ್ರ ಭೂನಾಥ ಎಂ।
ದಳವಳಿದು ಬಾಯ್ಬಿಟ್ಟು ಕೈಮುಗಿದು ನುಡಿದರೊಲ
ವಿಂದನಾಮಿಕಸತಿಯರು ॥೧೧

ಲಲಿತ ವಸುಮತಿ ಹುಟ್ಟುವಂದು ಹುಟ್ಟಿದ ಸೂರ್ಯ।
ಕುಲದ ರಾಯರ್ಗೆ ವಂಶದೊಳು ಕೀರ್ತಿಯೊಳು ಭುಜ।
ಬಲದೊಳೊರೆದೊರೆಯೆನಿಸಿ ಕನ್ನಿಕೆಯರಂ ಕೊಡುವ
ಭೂಪರಿಲ್ಲಿಂದು ತನಕ॥
ಹೊಲತಿಯರು ಬಂದಾವು ಸತಿಯರಾದಪ್ಪೆವೆಂ।
ಬುಲಿಹವೆಂಬುದು ಬಂದ ಕಾಲಗುಣವೋ ಸಿಂದ।
ನೆಲದ ಗುಣವೋ ನೋಡು ನೋಡೆಂದು ಕಡುಮುಳಿದು
ಕೋಪಿಸಿದನವನೀಶನು ॥೧೨

ಪಾವನಕ್ಷೀರಮುಂ ಕೊಡುವ ಕೆಚ್ಚಲ ಮಾಂಸ।
ವಾವ ಲೇಸಿನಿಮುಳ್ಳ ಮಧುವನೊಸೆದೀವ ನೊಳ।
ವಾವ ಲೇಸಧಿಕಕಸ್ತೂರಿಯಂ ಕೊಡುವ ಮೃಗ
ನಾಭಿ ತಾನಾವ ಲೇಸು॥

ದೇವರಿಗೆ ಸಲ್ಲವೇ ಉತ್ತಮಗುಣಂಗಳಿ।
ದಾರ್ವ ಕುಂದಂ ಕಳೆಯಲಾದವವನೀಶ ಕೇಳ್।
ಭಾವಿಸುವಡಿಂದೆಮ್ಮ ರೂಪುಜವ್ವನವಿರಲು
ಕುಲದ ಮಾತೇಕೆಂದರು ॥೧೩॥



ಅಕ್ಕಕ್ಕು ಬಚ್ಚಲುದಕಂ ತಿಳಿದಡಾರ ಮಾ।
ಹಕ್ಕೆ ಯೋಗ್ಯಂ ನಾಯ್ಗೆ ಹಾಲುಳ್ಳಡಾವನೂ।
ಟಕ್ಕೆ ಯೋಗ್ಯಂ ಪ್ರೇತವನದೊಳಗೆ ಬೆಳೆದ ಹೂ
ವಾರ ಮುಡಿಹಕ್ಕೆ ಯೋಗ್ಯಂ॥
ಮಿಕ್ಕ ಹೊಲತಿಯರು ನೀವೆನೆ ನಿಮ್ಮ ಜವ್ವನದ।
ಸೊಕ್ಕು ರೂಪಿನ ಗಾಡಿ ಜಾಣತನದೊಪ್ಪವೇ।
ತಕ್ಕೆ ಯೋಗ್ಯಂ ರಮಿಸಿದವರುಂಟೆ ಶಿವಶಿವೀ
ಮಾತು ತಾ ಹೊಲೆಯೆನೆಂದನು ॥೧೪॥

ಹಾಡನೊಲಿದಾಲಿಸಿದ ಕಿವಿಗೆ ಹೊಲೆಯಿಲ್ಲ ಮಾ।
ತಾಡಿ ಹೊಗಳಿದ ಬಾಯ್ಗೆ ಹೊಲೆಯಿಲ್ಲ ರೂಪ ನೆಱೆ।
ನೋಡಿದ ವಿಲೋಚನಕೆ ಹೊಲೆಯಿಲ್ಲ ಮೆಯ್ಮುಡಿಗ
ಳಿಂ ಸುಳಿವ ತಂಗಾಳಿಯಿಂ॥
ತೀಡುವ ಸುಗಂಧಮಂ ವಾಸಿಸಿದ ನಾಸಿಕಕೆ।
ನಾಡೆ ಹೊಲೆಯಿಲ್ಲ ಸೋಂಕಿಂಗೆ ಹೊಲೆಯುಂಟಾಯ್ತು।
ಕೂಡಿರ್ದ ಪಂಚೇಂದ್ರಿಯಂಗಳೊಳು ನಾಲ್ಕಧಮ
ವೊಂದಧಿಕವೇ ಎಂದರು ॥೧೫॥



ಕಂಡಜೀವವ್ವೈಸಲೇ ನಯನೇಂದ್ರಿಯಂ ಘ್ರಾ[illegible]।
ಕೊಂಡಜೀವವ್ವೈಸಲೇ ವಾಸನೆಯ ಕರ್ಣಂಗ।
ಳುಂಡಜೀವವ್ವೈಸಲೇ ಶಬ್ದಮಂ ದೂರದಿಂ
ದಲ್ಲದವು ಮುಟ್ಟಲಿಲ್ಲ॥

